






ತ್ರೈಮಾಸಿಕ

# ಸಿದ್ಧಗಂಗಾ

ಸಂಕ್ರಮಣ ಸಂಚಿಕೆ
ಜನವರಿ ೧೯೬೬






# ಸಿದ್ಧಗಂಗಾ

## ತ್ರೈಮಾಸಿಕ ಚಂದಾ ವಿವರ

**ಬಿಡಿ ಪ್ರತಿ : ರೂ. ೧-೨೫**

| | | |
|---|---|---|
| ವಾರ್ಷಿಕ ಚಂದಾ ಸಂಸ್ಥೆಗಳಿಗೆ | 6—00 | ಅಂಚೆವೆಚ್ಚ ಸೇರಿ |
| ವಾರ್ಷಿಕ ಚಂದಾ ವ್ಯಕ್ತಿಗಳಿಗೆ | 5—00 | ,, |
| ವಾರ್ಷಿಕ ಚಂದಾ ವಿದ್ಯಾರ್ಥಿಗಳಿಗೆ | 4—00 | ,, |

ಚಂದಾ ಹಣವನ್ನು :

ಪ್ರಕಾಶಕರು : **ಹಳೆಯ ವಿದ್ಯಾರ್ಥಿ ಸಂಘ,**

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಬೇಕು.

ಪ್ರಕಟನೆಗೆ ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪತ್ರಿಕೆಗಳನ್ನೂ :

ಸಂಪಾದಕ : **"ಸಿದ್ಧಗಂಗಾ"** (ತ್ರೈಮಾಸಿಕ)

ಹಳೆಯ ವಿದ್ಯಾರ್ಥಿ ಸಂಘ,

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಬೇಕು

---

## ಚಂದಾದಾರರಲ್ಲಿ ಪ್ರಕಾಶಕರ ವಿನಂತಿ

"ಸಿದ್ಧಗಂಗಾ'' ತ್ರೈಮಾಸಿಕ ಇದೀಗ ಸಂಕ್ರಮಣ ವಿಶೇಷಾಂಕವಾಗಿ ತಮ್ಮ ಕೈಸೇರುತ್ತಿರುವುದು ಸಂತಸದ ಸಂಗತಿ. ಪತ್ರಿಕೆ ಅಂಬೆಗಾಲಿಡುತ ಪ್ರಾರಂಭವಾಗಿ ಇದೀಗ ನಿಂತು ಕಾಲೂರಿ ನಡೆಯುವಂತಾಗಲು ತಮ್ಮ ಆರ್ಥಿಕ ನೆರವೇ ಮುಖ್ಯ ಕಾರಣ. ಇನ್ನು ಮುಂದೆಯೂ ತಾವು ಕ್ಷೇತ್ರಾಭಿಮಾನ ಹಾಗೂ ಸಾಹಿತ್ಯಾಭಿಮಾನಗಳಿಂದ ಈ ಪತ್ರಿಕೆಯನ್ನು ಉಳಿಸಿ ಬೆಳಸಬೇಕಾದುದು ಆವಶ್ಯಕ ವೆಂಬುದನ್ನು ನಾವು ತಮ್ಮಲ್ಲಿ ಬಿನ್ನಯಿಸಲಿಚ್ಛಿಸುತ್ತೇವೆ. ತಮ್ಮ ಚಂದಾ ಈ ವರ್ಷಕ್ಕೆ ಎಂದರೆ ಈ ಸಂಚಿಕೆಗೆ ಪೂರ್ತಿಯಾಯಿತು. ಮತ್ತೆ ತಾವು ತಮ್ಮ ಚಂದಾ ಹಣವನ್ನು ಪ್ರಕಾಶಕರಿಗೆ ಕೂಡಲೇ ತಲುಪಿಸಿ ನಮ್ಮ ಮುಂದಿನ ಕಾರ್ಯ ಸುಗಮವಾಗಿ ನಡೆಯುವಂತೆ ಮಾಡಬೇಕಾಗಿ ಪ್ರಾರ್ಥನೆ.

**ಪ್ರಕಾಶಕರು.**

ಆರು ಮುನಿದು ಎಮ್ಮನೇನು ಮಾಡುವರಯ್ಯ,
ಊರು ಮುನಿದು ನಮ್ಮನೆಂತು ಮಾಡುವುದಯ್ಯ,
ನಮ್ಮ ಕುನ್ನಿಗೆ ಕೂಸನೀಯಬೇಡ,
ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕಬೇಡ,
ಆನೆಯಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ ಅಯ್ಯ
ಕೂಡಲ ಸಂಗಮದೇವ ನೀವಿರುವನಕ.


ಸ್ಥಳ ದಾನ ಮಾಡಿದವರು :

ಜಿ. ಆರ್. ಸಿದ್ದಬಸವಯ್ಯ ಸನ್ಸ್

ತುಮಕೂರು.

# ಈ ಸಂಚಿಕೆಯಲ್ಲಿ

# ಸಿದ್ಧಗಂಗಾ

(ತ್ರೈಮಾಸಿಕ)

## ಸಂಕ್ರಮಣ ಸಂಚಿಕೆ

**ಜನವರಿ ೧೯೬೬**





# ಪ್ರಾರ್ಥನೆ

ಜಯ ಜಯ ಹೇ ಮಹಿಷಾಸುರ ಮರ್ದಿನಿ
ಜಯ ಚಾಮುಂಡಾಂಬಿಕೆ ಜನನಿ !
ಜಯ ಜಯ ಅಂಬ ತ್ರಿಭವನ ಮೋಹಿನಿ
ಜಯ ಹಿಮಗಿರಿತಟ ನಿವಾಸಿನಿ

ಅನೃತ ಅಧರ್ಮದ ಕೋಡಿಂದಿರಿಯುವ
ನವ ಮಹಿಷಾಸುರನುಪಟಳವು
ಹಿಮಶೈಲದ ಶಿವಶಾಂತಿಯು ಕಲಕಿದೆ,
ಮುನಿದೆದ್ದಿದೆ ಭಾರತ ಕುಲವು.

ಸತ್ಯ ಧರ್ಮ ಸಂಜನಿತ ಸಾತ್ವಿಕದ
ಕ್ರೋಧದ ಕೈದುವಿದೋ ತೊಡು.
ದೈತ್ಯನ ವಧಿಸಿ ಭಾರತ ಪುತ್ರಿಯು
ಹಣೆಗೆ ಜಯದ ತಿಲಕವನು ಇಡು.

— ಎಂ. ವಿ. ಸೀತಾರಾಮಯ್ಯ.

# ವಿನಮ್ರ ಪ್ರಾರ್ಥನೆ

ಮಹಾಶಯರೇ,

'ಸಿದ್ಧಗಂಗಾ' ತ್ರೈಮಾಸಿಕದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ಪ್ರಥಮ ವರ್ಗದ ಪತ್ರಿಕೆಯನ್ನಾಗಿ ಮಾಡಲು ವಾಚಕವೃಂದದ ಹಾಗೂ ಜನತೆಯ ವಿಶೇಷ ಆರ್ಥಿಕ ನೆರವನ್ನು ಆಶಿಸಿದ್ದೇವೆ.

ಪತ್ರಿಕೋದ್ಯಮದ ಯಶಸ್ಸಿಗೆ ಸ್ವಂತ ಮುದ್ರಣಾಲಯ, ವಿಚಾರಪೂರಿತ ಲೇಖನಗಳೂ ಅತ್ಯಗತ್ಯ. ಇದಕ್ಕಾಗಿ ಈ ಕೆಳಕಂಡಂತೆ ಆರ್ಥಿಕ ಸಹಾಯವನ್ನು ತಮ್ಮಿಂದ ಬಯಸಿದ್ದೇವೆ.

1) 200 ರೂ. ಮೇಲೆ ನೀಡುವವರು — ಪೋಷಕರು

2) 150 ರೂ. ಕೊಡುವವರು — ಪ್ರೋತ್ಸಾಹಕರು

3) 100 ರೂ. ಕೊಡುವವರು — ಸಹಾಯಕರು

4) 50 ರೂ. ಕೊಡುವವರು — ಹಿತೈಷಿಗಳು

ಹೀಗೆ ಆದರಪೂರ್ವಕವಾಗಿ ಧನ ಸಹಾಯ ಮಾಡುವ ಮಹನೀಯರ ಹೆಸರುಗಳನ್ನು ಪತ್ರಿಕೆಯಲ್ಲಿ ಕೃತಜ್ಞತಾಪೂರ್ವಕವಾಗಿ ಸ್ಮರಿಸಿ ಪ್ರಕಟಿಸಲಾಗುವುದು.

ಪ್ರಪ್ರಥಮವಾಗಿ ತುಮಕೂರಿನ ಶ್ರೀ ಸಿದ್ಧಗಂಗಾ ಹೈಸ್ಕೂಲಿನ ಶಿಕ್ಷಕರೂ, ಉತ್ತಮ ಬರಹಗಾರರೂ ಆದ ಶ್ರೀ ಬಿ. ಎಸ್. ಮಂಜುನಾಥ್, ಎಂ.ಎಸ್‌ಸಿ., ಬಿ.ಇಡಿ. ರವರು 200 ರೂಪಾಯಿಗಳ ಧನಸಹಾಯವಮಾಡುವುದರ ಮೂಲಕ ಪತ್ರಿಕೆಯ ಪೋಷಕರಾಗಲು ಒಪ್ಪಿರುವುದನ್ನು ಪ್ರಕಟಿಸಲು ನಮಗೆ ಅತೀವ ಹೆಮ್ಮೆ.

ಎರಡನೆಯದಾಗಿ ಸಹೃದಯರೂ, ಹಿತೈಷಿಗಳೂ ಆದ ಕಂಟ್ರಾಕ್ಟರ್ ಸಿ. ರಾಜಣ್ಣ ಬೆಂಗಳೂರು ಅವರು ಪತ್ರಿಕೆಯ ಪುರೋಭಿವೃದ್ಧಿಗಾಗಿ 200 ರೂ.ಗಳ ಧನ ಸಹಾಯವಿತ್ತು ಪೋಷಕರಾಗಲು ಒಪ್ಪಿರುವುದಕ್ಕೆ **ಸಂಘವು** ಅತೀವ ಸಂತೋಷಪಡುತ್ತದೆ.


## ಸಿದ್ಧಗಂಗಾ

ಸಂಪಾದಕರು :
**ಸಂ। ವಿ। ಟಿ. ವಿ. ಮುತ್ತಾಚಾರ್ಯ,**
ಬಿ.ಎ. (ಆನರ್ಸ್) ಬಿ.ಇಡಿ.

ಸಹಾಯ ಸಂಪಾದಕರು:
**ಪಂಡಿತ್ ಕೆ. ಪಿ. ಶಿವಲಿಂಗಯ್ಯ**
**ಕೆ. ಸೂರ್ಯನಾರಾಯಣರಾವ್,**
ಬಿ.ಎ .ಇಡಿ
**ಕೆ. ಜಿ. ನಾಗರಾಜಪ್ಪ, ಎಂ.ಎ.,**

ಪ್ರಕಾಶಕರು :
**ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ**

ಮುದ್ರಕರು:
**ಪೃಥ್ವಿ ಪ್ರಿಂಟರ್ಸ್, ಬಳೇಪೇಟೆ, ಬೆಂಗಳೂರು-2**

ಪತ್ರಿಕೆ ಹೊರಡುವ ಸ್ಥಳ :
**ಶ್ರೀ ಸಿದ್ಧಗಂಗಾ ಕ್ಷೇತ್ರ**

ಪತ್ರಿಕೆ ಹೊರಡುವ ಮಾಸಗಳು
**ಜನವರಿ**
**ಏಪ್ರಿಲ್**
**ಜುಲೈ**
**ಅಕ್ಟೋಬರ್**


---

### ಲೇಖಕರಲ್ಲಿ ವಿನಂತಿ

'ಸಿದ್ಧಗಂಗಾ' ಪತ್ರಿಕೆಗೆ ಮಾನ್ಯ ಲೇಖಕರಿಂದ ಸಾಹಿತ್ಯದ ವಿವಿಧ ಪ್ರಕಾರಗಳ ಲೇಖನಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು. ತಮ್ಮ ಹೆಸರು, ವಿಳಾಸಗಳ ಸಹಿತ ಕಾಗದದ ಒಂದು ಮಗ್ಗುಲು, ಲೇಖನಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಲು ಪ್ರಾರ್ಥನೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ ವಿಜ್ಞಾನ, ಶಿಕ್ಷಣ ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೆ ಮಾನ್ಯತೆ ಹೆಚ್ಚು. ಲೇಖಕರು ತಮಲ್ಲಿ ಲೇಖನದ ಪ್ರತಿಯನ್ನು ಕಾಯ್ದಿಟ್ಟುಕೊಳ್ಳಲು ಪ್ರಾರ್ಥನೆ. ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪ್ರತಿಗಳನ್ನೂ ಸಂಪಾದಕರ ವಿಳಾಸಕ್ಕೆ ದಯವಿಟ್ಟು ಕಳುಹಿಸಬೇಕು.

# ಅನ್ನ ಕುರುಕ್ಷೇತ್ರ

ಏದುವ ಮುದಿ ಎತ್ತನು ಕೆಟ್ಟಿರುವ ತುಂಬಿದ ಲಾರಿಗೆ ಕಟ್ಟಿ
ದಿಣ್ಣೆಯ ದಾರಿಯಲಿ ಬಾರಚಾಟಿಯಿಂದ ಬಿಗಿವ
ನಿರ್ದಯ ಕ್ರೂರಿಯ ಪಾಷಾಣ ಹೃದಯದ ದೌಲತ್ತು ನಡೆದಿದೆ.
ಮೂಳೆ ಹಂದರದ ಮೇಲೆ ಮಾಂಸ ಅಜ್ಜಿ ಬಜ್ಜಿ
ಮುಲುಕಿ ಮುಲುಕಿ ಎಳೆವಾಗ ನರನರನಾಡಿಯ ಮಸೆತ
ತೊಟ್ಟಿಕ್ಕುವ ರಕ್ತ ಮೂಕ ಪ್ರಾಣಿಯ ಯಂತ್ರ ಚಕ್ರಕೆ ಗ್ರೀಸು
ಮಾಂಸದಾಸೆಗೆ ಕಾಗೆ ಮೂಳೆ ಕುಕ್ಕುವ ಕುಟಿಕ
ಕ್ಷಣಕ್ಷಣವೂ ಅವತರಿಸುವ ಕಾನೂನಿನ ಕಣ್ಣಿಯಲಿ
ನಡುಬೀದಿಯಲ್ಲೇ ಸಾಮೂಹಿಕದ ಆತ್ಮಹತ್ಯೆ
ಲೋಕದೆದುರು ಆಡೊಂಬ್ಲಗಲೇ ನಿತ್ಯ ನಡೆದಿದೆ
ಯೋಜನೆಯ ಪ್ರಗತಿಯಜ್ಞ ಭ್ರಷ್ಟಾಚಾರಕ್ಕೆ
ಹಿರಿಯ ಪೌರೋಹಿತ್ಯದ ಪಟ್ಟ ಸಂದಿದೆ.
ಮಾನವೀಯತೆಯ ಯಜ್ಞ ಪಶುವಿಗೆ
ಅಧಿಕಾರ ಬೆಂಗಾವಲಾಗಿ ವಸ್ತ್ರಾಪಹರಣವಾಗಿದೆ.
ಹೆಣದ ಏಣಿಯನೇರಿ ನೋವು
ಧರ್ಮದ ಕದವ ತಟ್ಟುತಿದೆ
ಒಣಗಿ ಬೀಟೆಬಿಟ್ಟ ಬದುಕಿಗೆ
ತೆರೆದ ಧರ್ಮದ್ವಾರವೊಂದು ದೃಷ್ಟಿದೋಷಕೆ ಕನ್ನಡಕ.
ಸುತ್ತ ಭೀಕರವಾಗಿದೆ ಅನ್ನ ಕುರುಕ್ಷೇತ್ರ
ಪಾಂಡವರ ವಂಶವ ಬುಡಸಹಿತ ಕಿತ್ತೊಗೆದು
ದುರ್ಯೋಧನನಿಗೆ ಪಟ್ಟ ಕಟ್ಟುವ ಸನ್ನಾಹ !
ಪಾರ್ಥನ ರಥ ಸತ್ಯಸ್ಥಾಪನೆಯ
ಗೀತಾಸ್ತಂಭಕ್ಕೆ ಡಿಕ್ಕಿ ಹೊಡೆದಿದೆ.
ಉದ್ದ ಕೊಕ್ಕಿನ ಕೆಂಪು ಕತ್ತಿನ ರಣಹದ್ದುಗಳು
ರೆಕ್ಕೆ ಬಡಿದು ಹಾರಾಡುತ್ತಿವೆ ಸುತ್ತಮುತ್ತ.

—ಕೆ. ಜಿ. ನಾಗರಾಜಪ್ಪ, ಎಂ.ಎ.

# ಮನಸ್ಸು

ಸಾಕ್ಷಾತ್ಕಾರಿಯ ಮನಸ್ಸು ಮಹತ್ತರ ಶಕ್ತಿಯುಳ್ಳದ್ದು. ಈ ಮಹತ್ ಶಕ್ತಿ ನಮ್ಮ ವೈಯಕ್ತಿಕ ಜೀವನದ ಮೇಲೆ ಪರಿಣಾಮ ಮಾಡುವುದಲ್ಲದೆ ಬೇರೆ ಬೇರೆ ಜೀವನ ಮತ್ತು ವಸ್ತುವಿನ ಮೇಲೂ ಪರಿಣಾಮವನ್ನುಂಟುಮಾಡುತ್ತದೆ, ಅದಕ್ಕೆ ಒಂದು ಕತೆ ನೆನಪಾಗುತ್ತದೆ:–

ಒಮ್ಮೆ ಒಬ್ಬ ರಾಜ ಸವಾರಿ ಹೊರಟನು, ಪರಿವಾರ ಹಿಂಬಾಲಿಸುತ್ತಿತ್ತು. ಬಹುದೂರ ಸವಾರಿ ಮಾಡಿದನು. ಬೇಸಿಗೆಯ ದಗೆ, ದಣಿವು ಹೆಚ್ಚಿತು, ಆಯಾಸಗೊಂಡನು, ನೀರಡಿಕೆ ಅತಿಯಾಯಿತು. ಸ್ವಲ್ಪ ದೂರದಲ್ಲಿ ಹೆಚ್ಚ ಹಸಿರಾದ ತೋಟ ಕಂಡಿತು. ರಾಜ ತೋಟದ ಬಳಿ ಹೋಗಿ ಮುಂದೆ ನಿಂತನು. ಭವ್ಯವಾದ ಹಣ್ಣುಗಳು ಕಣ್ಣಿಗೆ ಬಿದ್ದುವು. ತೋಟದ ಮಾಲೀಕನನ್ನು ಕರೆದು "ದಾಹ ಹೆಚ್ಚು, ಹಣ್ಣನ್ನು ಕೊಡುತ್ತೀಯಾ" ಎಂದನು.

''ಪ್ರಭುಗಳು ದಯಮಾಡಿಸಬೇಕು. ತಮ್ಮ ಪಾದಧೂಳಿಯಿಂದ ನಾನು ಧನ್ಯನಾದೆನು, ದಯಮಾಡಿಸಬೇಕು'' ಎಂದು ಸಡಗರದಿಂದ ರಾಜನನ್ನು ಸ್ವಾಗತಿಸಿ ತೋಟಕ್ಕೆ ಹೋಗಿ ಎರಡು ದಾಳಿಂಬೆ ಹಣ್ಣುಗಳನ್ನು ಕಿತ್ತನು. ಅವು ಪರಿಪಕ್ವವಾಗಿದ್ದುವು. ದಾಳಿಂಬೆ ಬೀಜಗಳನ್ನು ಬಿಡಿಸಿ ಹಿಂಡಿದನು. ಒಂದು ಲೋಟ ರಸ ಬಂದಿತು. ಹಣ್ಣಿನ ರಸ ಬಹಳ ಮಧುರವಾಗಿತ್ತು. ಹಿಂದೆಂದೂ ಅವನು ಅಂಥ ರಸವನ್ನು ರುಚಿ ನೋಡಿರಲಿಲ್ಲ. ದೊರೆ ಕುಡಿದ ಅನಂತರ ತೋಟಗಾರನನ್ನು,

''ಕಂದಾಯ ಎಷ್ಟು'' ಎಂದನು.

"ನಾಲ್ಕು ಹೊನ್ನು"

ದೊರೆ ಮಂತ್ರಿಯನ್ನು ಕರೆದು "ಮಂತ್ರಿ ನಾಲ್ಕು ಹೊನ್ನು ಅತಿ ಕಡಿಮೆ. ಕಂದಾಯವನ್ನು ಹೆಚ್ಚು ಮಾಡು'' ಎಂದು ಅಜ್ಞೆ ಮಾಡಿದನು.

''ಅಪ್ಪಣೆ ಪ್ರಭು" ಎಂದ ಮಂತ್ರಿ.

ತೋಟದ ಮಾಲೀಕ ಉಪಕಾರಕ್ಕೆ ದೊರೆ ಮಾಡಿದ ಪ್ರತ್ಯುಪಕಾರ ಕಂಡು ''ಪ್ರಭು ಒಂದೇ ಒಂದು ಣ ಬಂದೆ'' ಎಂದವನೇ ಓಡಿದ ತೋಟಕ್ಕೆ. ಮತ್ತೆ ಎರಡು ದಾಳಿಂಬೆ ಹಣ್ಣು ತಂದು ಅದೇ ಲೋಟಕ್ಕೆ ಹಿಂಡಿ ''ಸ್ವೀಕರಿಸಬೇಕು. ದರಿದ್ರನ ಮೇಲೆ ಕೃಪೆ ದೋರಬೇಕು" ಎಂದು ಪ್ರಾರ್ಥಿಸಿದನು.

ರಾಜ ಕುಡಿಯಲು ಲೋಟವನ್ನು ಬಾಯಿಗೆ ಇಟ್ಟುಕೊಂಡು ಒಂದು ಗುಟುಕು ಗುಟುಕಿಸಿ ಲೋಟವನ್ನು 'ಥೂತ್' ಎಂದು ಕೆಳಗಿಟ್ಟನು. ಮೊದಲಿನ ಮಾಧುರ್ಯವಿಲ್ಲ, ಸವಿಯಿಲ್ಲ, ಸಪ್ಪೆ, ಒಗರು, ದೊರೆ ರೇಗಿ

''ಯಾವ ಗಿಡದ್ದು ?'' ಎಂದನು.

''ಅದೇ ಗಿಡದ್ದು'' ಎಂದು ತೋಟಗಾರ ಉತ್ತರಿಸಿದನು. ದೊರೆ ಮತ್ತೆ ಮತ್ತೆ ಪ್ರಶ್ನಿಸಿದನು. ತೋಟಗಾರ ''ಅದೇ ಗಿಡದ್ದು ಅದೇ ಕೊಂಬೆಯದು ಪ್ರಭು'' ಎಂದನು. ರಾಜನಿಗೆ ಇದೊಂದು ಸಮಸ್ಯೆಯಾಯಿತು. ಎಲ್ಲಾ ವಿದ್ವಾಂಸರನ್ನೂ ಕರೆಸಿದನು. ''ಮೊದಲ ಲೋಟದ ರಸ ಸಿಹಿ, ಎರಡನೇ ಸಲ ಅದೇ ಲೋಟವೂ ತುಂಬಲಿಲ್ಲ, ಕಾರಣವೇನು ?'' ವಿದ್ವಾಂಸರು ತಲೆ ಕೆಡಿಸಿಕೊಂಡರು. ಶಾಸ್ತ್ರದ ಕಟ್ಟುಗಳನ್ನು ಬಿಚ್ಚಿ

ಘೂಳುಹೊಡೆದು ಹಗಲಿರುಳು ತಿರುವಿಹಾಕಿದರೂ ಸೂಕ್ತ ವಾದ ಉತ್ತರ ದೊರೆಯಲಿಲ್ಲ. ದೊರೆಗೆ ದಿನೇ ದಿನೇ ಸಮಸ್ಯೆ ತಲೆ ತಿನ್ನತೊಡಗಿತು. ಕೊನೆಗೆ ಒಬ್ಬ ಸಾಧು ವನ್ನು ಸಂಧಿಸಿದನು. ದೊರೆ ತನ್ನ ಅಳಲನ್ನು ಸಾಧುವಿನ ಮುಂದೆ ತೋಡಿಕೊಂಡನು. ಸಾಧು ಎಲ್ಲವನ್ನು ಕೇಳಿ ತಿಳಿದುಕೊಂಡು ಅನಂತರ ''ಎರಡನೇ ಲೋಟದ ರಸ ವನ್ನು ಕುಡಿಯುವಾಗ ಯಾವುದಾದರೂ ಕೆಟ್ಟ ಯೋಚ ನೆಯನ್ನು ಮಾಡಿದೆಯಾ ?''

''ಹೌದು ಆ ತೋಟಕ್ಕೆ ಕಂದಾಯ ಹೆಚ್ಚು ಮಾಡುವ ಮನಸ್ಸು ಮಾಡಿದ್ದೆ''

''ಅದೇ ನಿನ್ನ ಸಮಸ್ಯೆಗೆ ಉತ್ತರ ಇಲ್ಲಿದೆ. ಅದರ ಪರಿಣಾಮವೇ ಇದು. ದುಷ್ಟ ವಾಸನೆಯುಳ್ಳ ಮನಸ್ಸು ತನ್ನ ದುಷ್ಟ ಪ್ರಭಾವವನ್ನು ಹಣ್ಣಿನ ಮೇಲೂ ಉಂಟು ಮಾಡಿದೆ. ಆದ್ದರಿಂದಲೇ ಹಣ್ಣಿನ ರಸ ಸಪ್ಪೆ ಯಾಯಿತು, ಕೆಟ್ಟಿತು.

ಆಗ ದೊರೆಗೆ ಜ್ಞಾನೋದಯವಾಯಿತು. ಮನ ಸ್ಸಿನ ಮಹತ್ವದರಿವಾಯಿತು.

ಮನಸ್ಸನ್ನು ಅರ್ಥಮಾಡಿಕೊಳ್ಳುವುದು ಕಷ್ಟ ವಾದುದು. ಆದರೂ ವಿಜ್ಞಾನಿಗಳು ಹೇಳುತ್ತಾರೆ ಮನಸ್ಸು ತರಂಗ ಮಾರ್ಗದಲ್ಲಿ ಹೋಗುತ್ತದೆ ಎಂದು. ನಮ್ಮಲ್ಲಿ ಉಂಟಾಗುವ ಯೋಚನೆಯ ದೃಷ್ಟಿ, ಗುರಿ ಎಲ್ಲಿ ರುತ್ತದೆಯೊ ಅಂತಹ ಪರಿಣಾಮ ಮನಸ್ಸಿನ ಮೇಲೆ ಉಂಟಾಗುತ್ತದೆ. ಮನಸ್ಸಿನ ಪ್ರಭಾವ ವ್ಯಕ್ತಿಗಳ ಮೇಲೆಯೇ ಅಲ್ಲ, ವಸ್ತುಗಳ ಮೇಲೂ, ಸಮಾಜದ ಮೇಲೂ ಉಂಟಾಗುತ್ತದೆ.

ಮನಸ್ಸು ಕೆಟ್ಟ ವಿಷಯ, ಒಳ್ಳೆ ವಿಷಯ ಎರ ಡನ್ನೂ ಚಿಂತಿಸುತ್ತದೆ. ಕೆಟ್ಟದ್ದನ್ನು ತೊರೆದು ಒಳ್ಳೆಯ ದನ್ನು ಚಿಂತಿಸುವುದೇ ಮಾನವನ ಗುರಿ.

---

ಯಾವನಿಗೆ ಏನೂ ತಿಳಿಯುವದಿಲ್ಲವೋ ಮತ್ತು ತಿಳಿಯದೆಂಬುದು ಗೊತ್ತಿ ಲ್ಲವೊ ಅಂಥವರು ಮೂರ್ಖರಿರುತ್ತಾನೆ. ಅವನನ್ನು ದೂರ ಓಡಿಸಿಬಿಡಿ.

ಯಾವನಿಗೆ ಏನೂ ತಿಳಿಯುವದಿಲ್ಲವೊ ಮತ್ತು ತನಗೇನೂ ತಿಳಿಯದೆಂದು ಗೊತ್ತಿದೆಯೋ ಅಂಥವನು ಸರಳ ಮನುಷ್ಯನಾಗಿರುತ್ತಾನೆ. ಅವನಿಗೆ ಕಲಿಸಿಕೊಡಿ. ಯಾವನಿಗೆ ಏನೊ ಒಂದಿಷ್ಟು ತಿಳಿಯುತ್ತದೋ ಮತ್ತು. ತನಗೇನೂ ತಿಳಿಯುತ್ತ ದೆಂದು ಗೊತ್ತಿರುವದಿಲ್ಲವೊ ಅಂಥವನು ನಿದ್ದೆ ಹೋಗಿರುತ್ತಾನೆ. ಅವನನ್ನು ಎಬ್ಬಿಸಿ.

ಯಾವನಿಗೆ ಏನೊ ಒಂದಿಷ್ಟು ತಿಳಿಯುತ್ತದೊ ಮತ್ತು ತನಗೆ ಅದು ತಿಳಿ ದಿದೆ ಎಂದು ಗೊತ್ತಿರುವುದೊ ಅವನು ಚತುರನಾಗುತ್ತಾನೆ. ಅವನನ್ನು ಗುರುವ ನ್ನಾಗಿ ಮಾಡಿಕೊಳ್ಳಿ.

# ಶ್ರೀ ರಮಣ ಮಹರ್ಷಿಗಳ ಒಂದು ಕಥೆ

ಒಬ್ಬ ಮನುಷ್ಯನಿದ್ದ. ಆತ ಬಲು ದೂರವಿದ್ದ ತನ್ನ ಅಳಿಯನಿಗೆ ಒಂದು ಪತ್ರ ಬರೆದ :

"ಈಗ ನಿನಗೆ ರಜ ಇದೆ. ಈ ಪತ್ರ ಕಂಡಕೂಡಲೇ ಇಲ್ಲಿಗೆ ಹೊರಟು ಬಾ, ಇಲ್ಲಿ ನಿನ್ನ ರಜಾ ದಿನಗಳನ್ನು ಸಂತೋಷವಾಗಿ ಕಳೆಯಬಹುದು."

ಅಳಿಯ ಪತ್ರವನ್ನು ಬಿಚ್ಚಿ ಓದಿದ. ಅವನ ದುರ್ದೈವಕ್ಕೆ ಯಾರೋ ಒಬ್ಬ ವ್ಯಕ್ತಿ, ಅದೇ ಹೊತ್ತಿನಲ್ಲಿಯೇ ಆ ಪತ್ರದ ಮೇಲೆ ಕಣ್ಣಾಡಿಸಿ ಅದರ ಸಾರವನ್ನು ಗ್ರಹಿಸಿದ. ಆ ಹೊಸ ವ್ಯಕ್ತಿ ಇಂತಹ ಸುವರ್ಣಾವಕಾಶ ಮತ್ತೊಂದು ಸಲ ತನಗೆ ಸಿಕ್ಕಲಾರದೆಂದು ಭಾವಿಸಿ ಆದಷ್ಟುಮಟ್ಟಿಗೆ ಅದನ್ನು ತನ್ನ ಸ್ವಂತ ಉಪಯೋಗಕ್ಕಾಗಿ ಬಳಸಿಕೊಳ್ಳಲು ಹಂಚಿಕೆ ಹೂಡಿದ.

ಅಳಿಯ ರೈಲು ಹತ್ತಿದ. ಆ ವ್ಯಕ್ತಿಯೂ ಅದೇ ರೈಲು ಹತ್ತಿದ. ತಲುಪಬೇಕಾದ ತಾಣ ಬಂತು. ಅಳಿಯ ಆ ವ್ಯಕ್ತಿ ಇಬ್ಬರೂ ಇಳಿದರು. ಆತನನ್ನು ಸ್ವಾಗತಿಸಲೆಂದು ಸ್ಟೇಷನ್ನಿಗೆ ಕಾರು ತೆಗೆದುಕೊಂಡು ಅವನ ಮಾವ ಬಂದಿದ್ದ. ಅಳಿಯ ಕಾರು ಹತ್ತಿ ಕುಳಿತ. ಆ ವ್ಯಕ್ತಿಯೂ ಧೈರ್ಯಮಾಡಿ ಅದೇ ಕಾರು ಹತ್ತಿದ. ಯಾರೂ ಉಸಿರೆತ್ತಲಿಲ್ಲ. ಆ ಹೊಸ ವ್ಯಕ್ತಿ ಅಳಿಯನ ಗೆಳೆಯನಿರಬೇಕೆಂದು ಮಾವ ಊಹಿಸಿದ. ಈ ಬಗ್ಗೆ ಯಾರೂ ಚರ್ಚಿಸಲಿಲ್ಲ.

ಮಾವನ ಮನೆಯ ಮುಂಭಾಗಕ್ಕೆ ಕಾರು ಬಂದು ನಿಂತಿತು. ಎಲ್ಲರೂ ಇಳಿದರು. ಮಾವ ಇಬ್ಬರನ್ನೂ ಬಹಳ ಆದರದಿಂದ ಬರಮಾಡಿಕೊಂಡ. ಅವರು ಇಳಿದುಕೊಳ್ಳಲು ತಕ್ಕ ಕೊಠಡಿಯನ್ನಾಗಲೇ ವ್ಯವಸ್ಥೆಮಾಡಿದ್ದ.

ಎಂಥ ಸನ್ಮಾನ ; ಎಂಥ ಆತಿಥ್ಯ ; ಎಂಥ ಉಪಚಾರ ! ಮಾವನಿಗಂತೂ ಹಿಡಿಸಲಾರದ ಸಂತೋಷ. ಅತಿಥಿಗಳಿಗಂತೂ ಸನ್ಮಾನಿತರಾದೆವೆಂಬ ಹಿಗ್ಗು.

ಆದರೆ ಹೊಸ ವ್ಯಕ್ತಿ ಊಟದ ಸಮಯ ಬಂದಾಗ ಎಲ್ಲರಿಗಿಂತಲೂ ಮೊದಲು ಬರುತ್ತಾನೆ. ಎಲ್ಲರಿಗಿಂತ ಮೊದಲೇ ಕೈಹಾಕುತ್ತಾನೆ. ಎಲ್ಲರಿಗಿಂತ ಮೊದಲೇ ಉಣ್ಣುತ್ತಾನೆ. ಹೊಟ್ಟೆಬಾಕನಂತೆ ವರ್ತಿಸುತ್ತಾನೆ, ಏನಿದು ! ಅಲ್ಲದೆ ಆತ ಹೇಳದೆ ಕೇಳದೆ ಅಡುಗೆ ಮನೆಗೆ ನುಗ್ಗಿ ಸಿಕ್ಕಿದ ಭಕ್ಷ್ಯಕ್ಕೆಲ್ಲ ಕೈಹಾಕಿ ತಿನ್ನುವುದಕ್ಕೂ ಕೂಡ ಹಿಂಜರಿಯುವುದಿಲ್ಲ. ಆದರೆ ಇದನ್ನು ಕಂಡರೂ ಮಾವ ಏನನ್ನೂ ಮಾಡುವಂತಿರಲಿಲ್ಲ. ತನ್ನ ಪ್ರೀತಿಯ ಅಳಿಯ ಏನು ತಿಳಿದುಕೊಳ್ಳುವನೋ ಎಂದು ಕಂಡೂ ಕಾಣದವನಂತೆಯೇ ಇದ್ದ.

ಈ ಠಕ್ಕ ಅಡುಗೆ ಮನೆಗೆ ನುಗ್ಗುತ್ತಿದ್ದುದು ಹಾಗಿರಲಿ, ಅಳಿಯನ ಕೊಠಡಿಯನ್ನೂ ಪ್ರವೇಶಿಸಿ ಅವನ ಅಂಗಿ, ಧೋತ್ರ, ಟೈ ಮುಂತಾದವುಗಳಿಗೂ ಕೈಹಾಕಿ ಯಾರ ಅಪ್ಪಣೆಯನ್ನೂ ಕೇಳದೆ ಉಟ್ಟುಕೊಳ್ಳಲು ಮೊದಲು ಮಾಡಿದ.

ಅಳಿಯನಿಗೆ ಇದು ಸಹನೆಗೆ ಮೀರಿದ ಸಂಗತಿಯಾಯಿತು. ಆದರೆ ಆ ವ್ಯಕ್ತಿ ತನ್ನ ಮಾವನ ಸಂಬಂಧಿಕನೆಂದು ಭಾವಿಸಿದ್ದರಿಂದ, ಅವನನ್ನು ಥರಾಟೆಗೆ ತೆಗೆದುಕೊಳ್ಳಲಾಗಲಿಲ್ಲ.

ಅಂತು ಎರಡು ಕಡೆಗಳಿಂದಲೂ ಆ ಠಕ್ಕನಿಗೆ ಅನುಕೂಲವೊದಗಿದ್ದರಿಂದ ಸ್ವೇಚ್ಛೆಯಾಗಿ ಸುಖವಾಗಿ ಕಾಲ ಕಳೆಯಲು ಸದವಕಾಶ ಸಿಕ್ಕಂತಾಯಿತು.

ಸ್ವಲ್ಪ ಕಾಲ ಹೀಗೆಯೇ ಕಳೆಯಿತು. ಅಳಿಯ ಮಾವಂದಿರಿಗೆ ಈ ಠಕ್ಕನ ಕಾಟದಿಂದ ಬೇಸರವಾಗ ತೊಡಗಿತು. "ಆದರೆ ಈ ಬಗ್ಗೆ ಮಾವನೊಡನೆ ಪ್ರಸ್ತಾಪ ಮಾಡಲು ಬಾಯಿ ಬಿಡುವುದು ಹೇಗೆ " ಎಂದು ಅಳಿಯ ತನಗೆತಾನೆ ಪ್ರಶ್ನೆ ಹಾಕಿಕೊಂಡ.

"ಇದನ್ನು ಅಳಿಯನಿಗೆ ಹೇಗೆ ತಿಳಿಸಲಿ ?" ಎಂದು ಮಾವನೂ ಪ್ರಶ್ನಿಸಿಕೊಂಡ. ಇಬ್ಬರಿಗೂ ಸಾಕಾಗಿ ಹೋಯಿತು.

ಕೊನೆಗೊಂದು ದಿನ ಮಾವ ಅಳಿಯನನ್ನು ಕೇಳಿಯೇಬಿಟ್ಟ :— "ನೀವೇಕೆ ಈ ವ್ಯಕ್ತಿಯನ್ನು ಕರೆತಂದಿರಿ ?"

ಅಳಿಯ ತಿರುಗಿಬಿದ್ದು ಪ್ರಶ್ನಿಸಿದ : "ಮಾವ, ಇಂತಹ ಉಪದ್ರವಕಾರಕ ವ್ಯಕ್ತಿಯನ್ನೇಕೆ ಮನೆಯಲ್ಲಿಟ್ಟುಕೊಂಡಿದ್ದೀರಿ? ಅವನು ನನ್ನ ಕೊಠಡಿಗೆ ಬರುತ್ತಾನೆ ಹೇಳದೆ ಕೇಳದೆ ನನ್ನ ಉಡುಪು ಮುಂತಾದವನ್ನೆಲ್ಲಾ ಉಪಯೋಗಿಸಿಕೊಳ್ಳುತ್ತಾನೆ."

ಠಕ್ಕ ಈ ಸಂಭಾಷಣೆಯನ್ನು ಕೇಳಿಸಿಕೊಂಡ, ಕೂಡಲೇ ಕಾಲಿಗೆ ಬುದ್ಧಿ ಹೇಳಿದ.

‡ ‡ ‡

ಜಗತ್ತಿನಲ್ಲಿ 'ನಾನು' ಎನ್ನುವುದು ಕೂಡ ಹೀಗೆಯೇ. ಕೇವಲ ಚುರುಕಾದ ವಿಚಾರಣೆ ವಂಚಕನನ್ನು ಹೊರದೂಡುವಂತೆ ಮಾಡಬಲ್ಲುದು. ಜಗತ್ತಿನಲ್ಲಿ 'ಅಹಂ' ಎಂಬುದು ಸುಳ್ಳೆಂದು ತಿಳಿಯಿರಿ. ಅವನೊಬ್ಬ ಠಕ್ಕ, ವಂಚಕ, ದಗಾಕೋರ. ಹೇಗೋ ಅವನು ನಮ್ಮ ಕಾಯಪ್ರವೇಶ ಮಾಡಿ ನಮ್ಮನ್ನು ಗೊಂಬೆಯಂತೆ ಕುಣಿಸುತ್ತಾನೆ. ನಮಗಿದರಿಂದ ದುಃಖ ಸಂಕಷ್ಟಗಳು ಪದೇ ಪದೇ ಒದಗಿ ನಾವು ವಿಪನ್ನಾವಸ್ಥೆಗೆ ಒಳಗಾಗುವುದು ಖಂಡಿತ.

ನೀವು ಈ 'ನಾನು' ಎಲ್ಲಿರುತ್ತದೆ ? ಅದರ ನಿಜವಾದ ಮೂಲವೆಲ್ಲಿ ? ಎಂಬುದನ್ನು ಚೆನ್ನಾಗಿ ಪರಿಶೀಲಿಸಿರಿ. ಆಗ ನಿಮಗೆ ಅದು ಅರ್ಥವಾಗದೆ ಇರುವುದಿಲ್ಲ. ಈ 'ಅಹಂ' ಎಂಬ ವಸ್ತು ಇಲ್ಲವೇ ಇಲ್ಲ.

ಭಾವಾನುವಾದ : **'ಗಾನಪ್ರಿಯ'**



ಡಾಂಭಿಕ ಭಕ್ತನಾಗುವುದಕ್ಕಿಂತ ನಾಸ್ತಿಕನಾಗಿರುವುದೇ ಒಳಿತು.

**—ಸ್ವಾಮಿ ವಿವೇಕಾನಂದ**

‡ ‡ ‡ ‡

ಐಶ್ವರ್ಯ ಬುದ್ಧಿವಂತನ ಸೇವೆ ಮಾಡುತ್ತದೆ, ಮೂರ್ಖನ ಮೇಲೆ ಶಾಸನ ಮಾಡುತ್ತದೆ.

# ಅಭಿನಂದನೆ



**‘ಪ್ರಾಯಂ ಕೂಸಾದೊಡೆ,**
**ಅಭಿಪ್ರಾಯಂ ಕೂಸಕ್ಕುಮೆ’**

—ಈ ನುಡಿಯನ್ನು ಸಾರ್ಥಕಗೊಳಿಸಿ,
ಹಿರಿಯರ ಸುಮಾರ್ಗದಲ್ಲೇ ಮುನ್ನಡೆಯು
ಬಯಸಿರುವ ನಮ್ಮ ಜನಪ್ರಿಯ
ನೂತನ ಪ್ರಧಾನಿ

**ಶ್ರೀಮತಿ ಇಂದಿರಾ ಗಾಂಧಿ**
ಅವರನ್ನು

ಹಾರ್ದಿಕವಾಗಿ ಅಭಿನಂದಿಸುತ್ತೇವೆ.

# *Doctor of Letters*

(*Honoris Causa*)

His Holiness Shri Sivakumar Swamiji of Siddaganga, on whom we are conferring the honorary degree of Doctor of Literature, is a great idealist and humanitarian who has served in many ways the noble cause of education first, by additing to his own traditional learning and culture a more formal academic training in Sanskrit literature and philosophy, and then by his generous efforts to diffuse education at all levels among the people. In the Sanskrit College at Siddhaganga, that home of great saints, eight-hundred students receive training in all branches of Sanskrit learning. At the same time, because education has long been the preserve of the more affluent or privileged classes, His Holiness has arranged for the maintenance, under conditions of rigorous discipline, of as many as two-thousand and two-hundred young men of all communities, and for inculcating in them a love of simple living with a sence of the dignity of all labour. Lover of literature that he is, and conscious of its social role, he has played host at Siddhaganga to the Kannada Literary Conference. Yet, not all his classical scholarship and cultural tastes have blinded His Holiness to the more pressing needs of the present times : among the many institutions he has sponsored is a College of Engineering ; so that Siddhaganga Math has become, in more than one way, not only a source of rapidly expanding educational enterprise, but a centre of inspiration for social and national service.

Mr. Chancellor, Sir, I present to you His Holiness Shri Sivakumar Swamiji of Siddhaganga, for the Degree of Doctor of Letters (Honoris Causa).

( The Old Boys' Association of Siddhaganga Gurukula is grateful to the Karnataka University for having honoured venerable Swamiji by presenting the '*Degree of Doctor of Letters.*')

**We,** the Chancellor, Vice-Chancellor, and Members of the Senate of the **Karnatak University** certify that the Honorary Degree of

# Doctor of Letters

has been conferred on

**His Holiness Shivakumar Swamiji,** B.A.,

at Dharwar, on Sixth November, in the year one thousand nine hundred and sixty-five.

**In Testimony** whereof are set the Seal of the said University and the Signature of the said Chancellor.

SEAL

V.V. Giri

Chancellor

# ಶ್ರದ್ಧಾಂಜಲಿ



**“ ಶಾಂತಿಪ್ರಿಯ—ಯೋಗಿ ; ರಣರಂಗದಿ ಯೋಧ ”**

ಎಸಿಸಿ ಭಾರತದ ಸರ್ವಾಂಗೀಣ ಪ್ರಗತಿಗಾಗಿ ದುಡಿದು ಮಡಿದ

ಯಶಸ್ವೀ ನಾಯಕ

**ಶ್ರೀ ಲಾಲ್ ಬಹದ್ದೂರ್ ಶಾಸ್ತ್ರೀಜಿಯವರಿಗೆ**

ನಮ್ಮ ಹೃತ್ಪೂರ್ವಕ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತೇವೆ.

# ಕವಿಗೋಷ್ಠಿಯ ಅಧ್ಯಕ್ಷ ಭಾಷಣ

44ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಮಾಡಿದ ಅಧ್ಯಕ್ಷ ಭಾಷಣ.

**ಡಾ॥ ಜಿ. ಎಸ್. ಶಿವರುದ್ರಪ್ಪ,**
ಎಂ.ಎ., ಪಿ ಹೆಚ್ ಡಿ.

ಶ್ರೀಗುರುರೂಪಿ, ಕವಿರೂಪಿ, ಸಹೃದಯರೂಪಿ ಕನ್ನಡ ಬಂಧುಗಳಿಗೆ ನನ್ನ ನಮಸ್ಕಾರ—

ನಿಮ್ಮ ಹರಕೆಯಿಂದ, ನಿಮ್ಮ ಹೃದಯದ ವಾಣಿಯಾಗಿ ಇಲ್ಲಿ ನಿಂತು ಮನ್ನಣೆ ಪಡೆಯುವ ಭಾಗ್ಯವನ್ನು ನೀವೇ ನನಗೆ ಒದಗಿಸಿದ್ದೀರಿ. ಕವಿಯಾಗಿ ನಾನು ಸಾಧಿಸಿರುವುದು ಅತ್ಯಲ್ಪ; ನೀವು ತೋರಿಸಿರುವ ಈ ಮನ್ನಣೆ ಅಪಾರ. ವಯಸ್ಸಿನಲ್ಲಿ, ಮನಸ್ಸಿನಲ್ಲಿ, ಕಾವ್ಯ ಕಾಯಕದಲ್ಲಿ ನನಗಿಂತಲೂ ಹಿರಿಯರಿರುವಾಗ, ಮೂಲೆಯಲ್ಲಿ ಮುದುರಿನಿಂತ ಮೋಡಕ್ಕೆ ನಿಮ್ಮ ಪ್ರೀತಿಯ ಬಂಗಾರದಂಚನ್ನು ಕಟ್ಟಿ ಇಲ್ಲಿ ತಂದು ನಿಲ್ಲಿಸಿದ್ದೀರಿ.

ಈ ಸಮ್ಮೇಳನ ಪವಿತ್ರವಾದ, ತಪೋವನಸದೃಶವಾದ ಈ ಸಿದ್ಧಗಂಗೆಯಲ್ಲಿ ಸೇರಿದೆ. ನನ್ನ ವಿದ್ಯಾರ್ಥಿ ಜೀವನದ ಐದು ಮಹತ್ವಪೂರ್ಣವಾದ ವರ್ಷಗಳನ್ನು ನಾನು ಈ ಆಶ್ರಮದಲ್ಲಿ ಕಳೆದಿದ್ದೇನೆ ಇಲ್ಲಿನ ಈ ಬಂಡೆ ಬೆಟ್ಟಗಳಿಗೆ, ಇಲ್ಲಿನ ಗಿಡಮರಗಳಿಗೆ, ಬೆಟ್ಟದ ಮೇಲೆ ನಿಂತು ಕೈಬೀಸುವ ಕಾವಿಯ ಬಾವುಟಕ್ಕೆ, ಇಲ್ಲಿನ ದೇಗುಲದ ಗಂಟೆಗಳಿಗೆ, ಇಲ್ಲಿನ ಹಳೆಯ ಮುಖಗಳಿಗೆ ನನ್ನ ಪರಿಚಯ ಚೆನ್ನಾಗಿದೆ. ಈ ಬೆಟ್ಟ, ಈ ಆಶ್ರಮ, ಇಲ್ಲಿನ ದೇಗುಲಗಳ ಗಂಧನಾದನವರ್ತುಲ, ಇಲ್ಲಿ ಬೆಳಗಿನ ಝಾವ ಭೋರ್ಗರೆಯುವ ವೇದಘೋಷ, ಎಲ್ಲಕ್ಕೂ ಮಿಗಿಲಾಗಿ ಇಲ್ಲಿನ ಶ್ರೀ ಸ್ವಾಮಿಗಳವರ ಆಶೀರ್ವಾದ, ಆಗತಾನೇ ಮೊಳೆಯುತ್ತಿದ್ದ ನನ್ನ ಕವಿತೆಗೆ ಕಣ್ಣೂಡಿಸಿ, ಗರಿಮೂಡಿಸಿ, ಹಾಲೂಡಿಸಿ ನನ್ನನ್ನು ವಿಸ್ತಾರವಾದ ಲೋಕದ ಮೇಲೆ ಹಾರಿಬಿಟ್ಟವೆ. ಮತ್ತೆ ಬಹುಕಾಲದ ಮೇಲೆ ನಿಮ್ಮ ಹಾರೈಕೆ, ಶ್ರೀ ಗುರುವಿನ ಕೃಪೆ ನನ್ನನ್ನು ಇಲ್ಲಿಗೆ ಎಳೆದು ತಂದಿದೆ. ಇಲ್ಲಿಂದ ನಾನು ನಾಲ್ಕು ಮಾತನ್ನು ಹೇಳುತ್ತೇನೆ. ಕವಿಗಳೂ, ಸಹೃದಯರೂ ದಯವಿಟ್ಟು ಕೇಳಬೇಕು :

ಕಾವ್ಯಕ್ಕಿಂತ ಜೀವನ ದೊಡ್ಡದು; ಆದುದರಿಂದಲೆ ಎಷ್ಟೋ ಶತಮಾನಗಳಿಂದ ಈ ಬದುಕಿನ ನಿರಂತರ ಪ್ರವಾಹವನ್ನು ಕವಿಗಳು ತಮ್ಮ ಕಾವ್ಯದ ಪಾತ್ರೆಗಳಿಂದ ಅಳೆದು ಸುರಿದರೂ ಅದು ಮುಗಿಯದಿದೆ; ಅಗಮ್ಯವಾಗಿದೆ. ಬದುಕು ಕಾವ್ಯಕ್ಕೆ ಮೂಲಭಿತ್ತಿಯಾಗಿ, ಮೀರಿ ನಿಂತಿದೆ. ಕವಿಯೇನಿದ್ದರೂ ಈ ಬದುಕಿನಿಂದಲೇ ಎದ್ದು ಬಂದು, ಯಾವುದೋ ಒಂದು ನಿಯತ ಕಾಲ-ದೇಶಗಳ ಪರಿಮಿತಿಯಲ್ಲಿ ಜೀವಿಸಿ, ತನ್ನ ಅನುಭವಕ್ಕೆ ಬಂದ ಬದುಕನ್ನು ಮಾತಿನಲ್ಲಿ ಕಡೆದು ನಿಲ್ಲಿಸಿ, ಅದಕ್ಕೆ ಒಂದು ಅರ್ಥವನ್ನು ಕೊಟ್ಟು ಅಥವಾ ಕಂಡುಕೊಂಡು ಬದುಕಿನ ಬೆಲೆಯನ್ನು ತನ್ನವರ ಹಾಗೂ ಮುಂದಿನವರ ಪಾಲಿಗೆ ಹೆಚ್ಚಿಸುತ್ತಾನೆ.

ಆದರೆ ಕೆಲವರಿಗೆ ಭ್ರಮೆ. ಕಾವ್ಯ ಬದುಕಿಗಿಂತ ದೊಡ್ಡದು ಎಂದೋ, ಕಾವ್ಯದಲ್ಲಿ ಬದುಕೆಲ್ಲವನ್ನೂ ಪ್ರಕಟಿಸಬಹುದು ಎಂದೋ ಭ್ರಮೆ. ಹೀಗಾದಾಗ ಒಬ್ಬ ವ್ಯಕ್ತಿಯ ಅನುಭವದಲ್ಲಿ ಬದುಕಿನ ಸಮಸ್ತವೂ ವ್ಯಕ್ತವಾಗಬೇಕು, ಅಥವಾ ವ್ಯಕ್ತವಾಗಿವೆ ಎಂದು ಇಂಥವರು ಭಾವಿಸುತ್ತಾರೆ. ಬದುಕಿನಲ್ಲಿ ತಾನು ಕಂಡ, ಯಾವುದೋ ಒಂದು ಮುಖವನ್ನು ಕುರಿತು ಕವಿತೆ ಬರೆದ ಕವಿಗೆ ಬದುಕಿನ ಉಳಿದ ಮುಖಗಳ ಪರಿಚಯ ಇಲ್ಲವೆಂದೋ, ಅನುಭವವೇ ಇಲ್ಲವೆಂದೋ ಅಥವಾ ಅಂಥದೊಂದು ಮುಖದಿಂದ ಆತ ಪ್ರಜ್ಞಾಪೂರ್ವಕವಾಗಿ ಪಲಾಯನ ಮಾಡುತ್ತಿದ್ದಾನೆ ಎಂದೋ, ತಾವು ಮಾತ್ರ ಬದುಕಿನ ಎಲ್ಲ ಮುಖಗಳನ್ನೂ ಬಲ್ಲವರಂತೆ ನಮ್ಮಲ್ಲಿ ಎಷ್ಟೋ ಜನ ಮಾತನಾಡಿಬಿಡುತ್ತಾರೆ.

ಬದುಕಿಗೆ ಎಷ್ಟು ಮುಖವೋ ಏನು ಕತೆಯೋ. ಅದನ್ನು ಬಲ್ಲವರು ಯಾರು? ಈ ಅಗಾಧವಾದ ಬದುಕು ಯಾರೋ ಒಬ್ಬನು, ಅಥವಾ ಹಲವು ವ್ಯಕ್ತಿಗಳು ಅಳೆದು ತೂಗಿ ಮುಗಿಸಿಬಿಡಬಹುದಾದಷ್ಟು ಸಣ್ಣ ವಸ್ತುವಲ್ಲ ಸಾವಿರ ವರ್ಷದ ಹಿಂದೆಯೇ ಆನಂದ ವರ್ಧನ ಸಾರಿ ಹೇಳಿದ್ದಾನೆ :

> ವಾಚಸ್ಪತಿ ಸಹಸ್ರಾಣಾಂ ಸಹಸ್ರೈರಪಿ ಯತ್ನತಃ
> ನಿಬದ್ಧಾಪಿ ಕ್ಷಯಂ ನೈತಿ ಪ್ರಕೃತಿರ್ಜಗತಾಮಿವ ॥

ಸಹಸ್ರ ಮಂದಿ ಬೃಹಸ್ಪತಿಗಳೇ ಪ್ರಯತ್ನಪಟ್ಟು ಇದನ್ನು (ಕಾವ್ಯ ವಸ್ತುವನ್ನು) ಅಳವಡಿಸಿಕೊಂಡರೂ ಜಗತ್ತಿನ ಪ್ರಕೃತಿಯಂತೆಯೇ ಇದು ಕೂಡ ಕೊನೆಮುಟ್ಟಲಾರದು" ಎಂದು.

ಕಾವ್ಯ ಎನ್ನುವುದು ಇಂಥ ಕೊನೆ ಮುಟ್ಟದ ಬದುಕನ್ನು ; ಒಂದು ವಿಶಿಷ್ಟ ಮನೋಧರ್ಮದ ಮೂಲಕ ಕಂಡು, ಕಂಡರಿಸಿದ ಜಗತ್ತು. *Art is a world seen through a temperament* ಎನ್ನುವ ಒಂದು ಮಾತಿದೆ. ಕಲೆ ಎನ್ನುವುದು ಒಂದು ಬೇರೆಯ ಜಗತ್ತು. ಅದು ನಮ್ಮ ಚಿರಪರಿಚಿತವಾದ ಲೋಕದಿಂದ ಒಂದಿಷ್ಟು ಭಿನ್ನವಾದಂತೆ ತೋರಲು ಕಾರಣ ಅದು ಯಾವುದೋ ಒಂದು ವಿಶಿಷ್ಟ ಮನೋಧರ್ಮದ ಮೂಲಕ ಹಾಯ್ದು ಬಂದದ್ದು ಎನ್ನುವುದು ಎಲ್ಲರಿಗೂ ಈ ಜಗತ್ತು ಹೇಗಿದೆಯೋ ಹಾಗೇ ಕಂಡಿದ್ದರೆ ಅಲ್ಲಿ ಕಾವ್ಯವೂ ಹುಟ್ಟುತ್ತಿರಲಿಲ್ಲ, ಕಲೆಯೂ ಹುಟ್ಟುತ್ತಿರಲಿಲ್ಲ. ಒಂದು ವೇಳೆ ಕಾವ್ಯ ಹುಟ್ಟಿದ್ದರೆ ಎಲ್ಲರ ಕವಿತೆಯೂ ಒಂದೇ ರೀತಿಯದಾಗಿ ಬೇಸರ ತರುತ್ತಿತ್ತು. ಆದರೆ ವಾಸ್ತವ ಸ್ಥಿತಿ ಹಾಗಿಲ್ಲ. ಪ್ರತಿಯೊಬ್ಬ ಕವಿಯ ಕಾವ್ಯವೂ ಶತಮಾನಗಳಿಂದ ಬೇರೆ ಬೇರೆಯ ಸೊಗಸನ್ನು ಪಡೆದೇ ಮೂಡಿದೆ. ಕಾರಣ, ಅದು ಒಬ್ಬೊಬ್ಬ ಕವಿಯೂ ಅವನವನಿಗೆ ವಿಶಿಷ್ಟವಾದ ಮನೋಧರ್ಮದ ಮೂಲಕ ಕಂಡ ಜಗತ್ತು. ಇಲ್ಲಿ "ಮನೋಧರ್ಮ" ಎನ್ನುವ ಮಾತು ಗಮನಿಸಬೇಕಾದದ್ದು. ಈ ಮನೋಧರ್ಮ ಎನ್ನುವುದು ಪ್ರತಿಯೊಬ್ಬ ಕವಿಗೂ ಹುಟ್ಟಿನೊಡನೆ ಬಂದದ್ದು ಅಥವಾ ಪ್ರಕೃತಿದತ್ತವಾದದ್ದು. ಇಂಥ ಒಂದು ಮನೋಧರ್ಮವುಳ್ಳ ವ್ಯಕ್ತಿ, ಆ ಮನೋಧರ್ಮದ ಮೂಲಕವಾಗಿಯೇ ಲೋಕವನ್ನು ನೋಡುವುದು ಅನಿವಾರ್ಯ. ಹಾಗೆ ಆತ ತಾನು ಕಂಡ, ಉಂಡ ಬದುಕನ್ನು, ತನ್ನ ಪಾಲಿಗೆ ಎಟುಕಿದ ಬದುಕನ್ನು ತನ್ನ ಸ್ವಭಾವಾನುಸಾರಿಯಾದ ವಿಶಿಷ್ಟಪದರಚನೆಯಲ್ಲಿ ಮೂರ್ತಗೊಳಿಸುತ್ತಾನೆ. ಹೀಗೆ ಮೂರ್ತಗೊಂಡದ್ದನ್ನು ನಾವು "ಇದು ಆತನ ಕಾವ್ಯ" ಎಂದು ಗುರುತಿಸುತ್ತೇವೆ. ಆ ಕಲೆಯನ್ನು ಕುರಿತು ವಿವೇಚಿಸುವಾಗ ನಾವು ಪ್ರಶ್ನಿಸಬೇಕಾದದ್ದು ಆ ಮನೋಧರ್ಮ ಏಕೆ ಹೀಗಿದೆ ಎಂಬುದನ್ನಲ್ಲ; ಸಹೃದಯರಾಗಿ, ವಿಮರ್ಶಕರಾಗಿ ನಾವು ಕೇಳಬೇಕಾದದ್ದು ಇಷ್ಟು: ಇಲ್ಲಿ ಆತನ ಅನುಭವ ತೀವ್ರವಾಗಿ ಅನುಭೂತವಾಗಿದೆಯೇ ಇಲ್ಲವೆ; ಆ ಅನುಭವ ಸಮರ್ಪಕವಾದ ಅಭಿವ್ಯಕ್ತಿಯನ್ನು ಪಡೆದಿದೆಯೇ ಇಲ್ಲವೆ-ಎನ್ನತಕ್ಕದ್ದು. ಹೀಗಾಗಿ ಒಂದು ಕಡೆ ಆ ಮನೋಧರ್ಮಕ್ಕೆ ಉಚಿತವಾದ ಅನುಭವ ದೃಷ್ಟಿಯಿಂದ, ಮತ್ತೊಂದು ಕಡೆ ಆ ಅನುಭವ ಅಭಿವ್ಯಕ್ತಗೊಂಡಿರುವ ಭಾಷೆಯ, ಅಥವಾ ರೀತಿಯ ದೃಷ್ಟಿಯಿಂದ ಪರಿಶೀಲಿಸಬೇಕು. ಅಗಾಧವಾದ ಈ ಬದುಕಿನಲ್ಲಿ ತನಗೆ ಎಟುಕಿದಷ್ಟನ್ನು ತನ್ನ ಪರಿಭಾವನೆಗೆ ಒಳಗುಪಡಿಸಿಕೊಂಡು ತನ್ನ ಮನೋಧರ್ಮಕ್ಕೆ ಅನುಸಾರವಾಗಿ ಅಳವಡಿಸಿಕೊಂಡು ಕಡೆದಿಡುವಲ್ಲಿ, ಹಾಗೆ ಮೂಡಿದ್ದು ಎಷ್ಟರಮಟ್ಟಿಗೆ ಕಾವ್ಯವಾಗಿದೆ, ಅಥವಾ ಕಾವ್ಯವಾಗಿಲ್ಲ ಎನ್ನುವುದನ್ನು ಮೊದಲು ನೋಡಲು ಕಲಿತರೆ ಸಾಕು.

ಇದನ್ನು ತಿಳಿದಾಗ ಯಾವ ಒಬ್ಬ ಕವಿಯೂ ತಾನು ಬರೆದ ಸಹಜವಾದ ಕಾವ್ಯ, ಉಳಿದವರು ಅಲ್ಲ. ತನ್ನದೇ ವಿಶಿಷ್ಟವಾದ ಮನೋಧರ್ಮ, ಉಳಿದವರದು

ಅಲ್ಲ ಎಂದು ಹೇಳಲಾರ. ಆದರೆ ಇತ್ತೀಚೆಗೆ ಕನ್ನಡ ಕಾವ್ಯವನ್ನು ಕುರಿತು ನಡೆದ ಗೊಂದಲಗಳಲ್ಲಿ ಇಂಥ ಭಾವನೆಗೆ ಅವಕಾಶವಾಗಿರುವುದು ವಿಷಾದದ ಸಂಗತಿ. ನವ್ಯ ಕಾವ್ಯದ ವೇದಿಕೆಯ ಮೇಲಿನ ಹಲವು ಧ್ವನಿವರ್ಧಕದ ಯಂತ್ರಗಳು ಪ್ರಸಾರ ಮಾಡಿ ಅನೇಕ ಅಭಿಪ್ರಾಯಗಳಲ್ಲಿ ಇವೂ ಕೆಲವು : ನವ್ಯ ಎನಿಸಿಕೊಂಡ ಕವಿ ಬರೆಯುವ ಕಾವ್ಯವೇ ಕಾವ್ಯ ; ನವ್ಯಕಾವ್ಯ ನಿರೂಪಿಸುವ ಜೀವನದೃಷ್ಟಿಯೇ ನಿಜವಾದ ಜೀವನ ದೃಷ್ಟಿ ; ನವ್ಯ ಕಾವ್ಯದಲ್ಲಿಯೇ ಸಮಕಾಲೀನ ಪ್ರಜ್ಞೆ ಅಭಿವ್ಯಕ್ತವಾಗಿದೆ. ಉಳಿದ ಕವಿಗಳು ವಾಸ್ತವ ಸತ್ಯವನ್ನು ಎದುರಿಸಲಾರದೆ ಮುಖ ತಿರುಗಿಸಿದ್ದಾರೆ, ಇಲ್ಲವೇ ಅನುಭವದ ಸಂಕೀರ್ಣತೆಯನ್ನು ಸರಳಗೊಳಿಸುವ ಅಪ್ರಾಮಾಣಿಕತೆಯಲ್ಲಿ ತೊಡಗಿದ್ದಾರೆ — ಇತ್ಯಾದಿ. ಈ ಹಲವು ಪ್ರಚಾರಗಳಿಂದ, ಹೊಸದಾಗಿ ಕಾವ್ಯ ಬರೆಯತಕ್ಕ ತರುಣ ಚೇತನಗಳಲ್ಲಿ ವಿಶೇಷ ಗೊಂದಲವಾಗಿದೆ ; ಅಲ್ಲದೆ ಈ ಬಗೆಯ ದೃಷ್ಟಿವೈಪರೀತ್ಯದಿಂದ ಸರಿಯಾದ ಜೀವನದೃಷ್ಟಿಯೇ ಇಲ್ಲದೆ ವ್ಯಕ್ತಿತ್ವದ ಬಹುಮುಖವಾದ ಬೆಳವಣಿಗೆಗೆ ಧಕ್ಕೆಯುಂಟಾಗುತ್ತದೆ ಎಂಬುದನ್ನು ಗಮನಿಸಬೇಕು.

ವಾಸ್ತವವಾಗಿ ಪ್ರತಿಯೊಬ್ಬ ಲೇಖಕನ ಮನೋಧರ್ಮವೂ ವಿಶಿಷ್ಟವಾದುದು. ಈ ಮನೋಧರ್ಮದಲ್ಲಿ ವೈವಿಧ್ಯಗಳುಂಟು. ಕೆಲವರದು ಸ್ವಭಾವತಃ ವ್ಯಗ್ರ, ಕೆಲವರದು ಮಾರ್ದವ, ಕೆಲವರದು ಚಿಂತನ ಶೀಲ ಇತ್ಯಾದಿ. ಅದು ಅವನವನ ಆವರಣ, ವಿದ್ಯೆ, ಸಂಸ್ಕಾರ, ಸಂಸ್ಕೃತಿ ಇತ್ಯಾದಿಗಳಿಂದ ರೂಪಿತವಾದದ್ದು. ಹೀಗೆ ಅವನವನಿಗೆ ವಿಶಿಷ್ಟ ಮನೋಧರ್ಮವುಳ್ಳ ವ್ಯಕ್ತಿ ಅವನು ಕಂಡ ಬದುಕನ್ನು ಜೀವಂತವಾಗಿ ಅನುಭವಿಸದೆ ಅದು ಅವನಲ್ಲಿ ಕಲೆಯಾಗಿ ರೂಪುಗೊಳ್ಳದು. ಪ್ರತಿಯೊಬ್ಬ ಲೇಖಕನು ತನ್ನಪಾಲಿನ ಬದುಕನ್ನು ಎದುರಿಸುತ್ತಾನೆ, ಎದುರಿಸಬೇಕು. ಯಾವ ನಿಜವಾದ ಲೇಖಕನೂ ತನ್ನ ಸಮಕಾಲೀನ ಜೀವನದಿಂದ ತಪ್ಪಿಸಿಕೊಳ್ಳಲಾರ.* ಆದ ಕಾರಣ ಕವಿಯಾದವನಿಗೆ ಸಮಕಾಲೀನ ಪ್ರಜ್ಞೆ ಇಲ್ಲ ಅಥವಾ ಅದರಿಂದ ಅವನು ತಪ್ಪಿಸಿಕೊಂಡಿದ್ದಾನೆ ಎನ್ನುವ ಮಾತಿಗೆ ಅರ್ಥವಿಲ್ಲ. ಅವನು ತನ್ನ ಅನುಭವಕ್ಕೆ ಅಂದು ಬಂದ ಬದುಕನ್ನು ಅಥವಾ ಸಮಕಾಲೀನ ಪ್ರಜ್ಞೆಯನ್ನು ಪ್ರಕಟಿಸಬಲ್ಲ. ಈ "ಸಮಕಾಲೀನ ಪ್ರಜ್ಞೆ" ಎನ್ನುವ ಮಾತು ಎಷ್ಟೋವೇಳೆ ಅಪಾರ್ಥದಲ್ಲಿ ವ್ಯರ್ಥವಾಗಿದೆ. ಈ ದಿನ ಹಲವರು ಭಾವಿಸಿರುವಂತೆ ಸಮಕಾಲೀನ ಪ್ರಜ್ಞೆ ಎನ್ನುವುದು ವ್ಯಕ್ತಿಯಿಂದ ವ್ಯಕ್ತಿಗೆ ಅವನ ಸಾಂಸ್ಕೃತಿಕ, ಧಾರ್ಮಿಕ ಸಂಸ್ಕಾರಗಳಿಗೆ ಅನುಸಾರವಾಗಿ ಭಿನ್ನ ಭಿನ್ನವಾಗಿರಬಹುದು. ಬದುಕಿನ ನಿರಾಶೆ. ಜಿಗುಪ್ಸೆ, ವಿಕೃತಿ ಇತ್ಯಾದಿಗಳನ್ನು ಅತ್ಯಧಿಕ ಪ್ರಮಾಣದಲ್ಲಿ ಅಭಿವ್ಯಕ್ತಪಡಿಸುವ ಕವಿಗೆ ಇರುವ "ಸಮಕಾಲೀನ ಪ್ರಜ್ಞೆ", ಶ್ರದ್ಧೆ, ಉತ್ಸಾಹ, ಸೊಗಸು ಇವುಗಳನ್ನು ಅಭಿವ್ಯಕ್ತಪಡಿಸುವ ಕವಿಯಲ್ಲಿ ಇಲ್ಲವೆಂದು ಹೇಗೆ ಹೇಳುವುದು ? ಹತ್ತು ವರ್ಷಕ್ಕೂ ಹಿಂದೆ ಆರಂಭವಾದ ನವ್ಯ ಕಾವ್ಯದ ಉದಯರಾಗ ಇದು : ಶ್ರದ್ಧಾರಾಹಿತ್ಯ. ಮನುಕುಲದ ಎಲ್ಲ ಬೆಲೆಗಳೂ ತಲೆಕೆಳಗಾಗಿವೆ ; ನಮ್ಮ ಪೂರ್ವ ಋಷಿ ನಿರ್ಮಿತವಾದ ಮೌಲ್ಯಗಳ ಸೇತುವೆ ಮುರಿದುಬಿದ್ದಿದೆ ; ಜನಜೀವನದಲ್ಲಿ ಹತಾಶೆ, ನಿರುತ್ಸಾಹ, ಕ್ರೌರ್ಯ ಇವುಗಳೇ ತಾಂಡವವಾಡಿವೆ. ಇವು ವಿವಿಧ ಸ್ವರಗಳು. ಈ ಭಾವನೆಯನ್ನು ವ್ಯಕ್ತಪಡಿಸುವಂಥ ಕವಿ ಸಮಕಾಲೀನ ಪ್ರಜ್ಞೆ ಉಳ್ಳವನು. ಉಳಿದವರಿಗೆ ವಾಸ್ತವ ಸ್ಥಿತಿ ತಿಳಿಯದು ಎನ್ನುವುದು ವಾದ. ಹೀಗಾಗಿ ಅಂದು ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳೆಲ್ಲವೂ ಭಾರತ ಸ್ವತಂತ್ರವಾದ ಮರುದಿನವೇ ತಲೆಕೆಳಗಾದುವೆಂದೂ, ಅದರಿಂದ ಜನಜೀವನದ ಶ್ರದ್ಧೆಯ ಬುಡವೇ ಅಲುಗಿತೆಂದೂ ಅವರು ಪ್ರಸಾರ ಮಾಡಿದರು. ನಮ್ಮ ದೇಶದ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಭಾವನೆಗಳು ಸದಾ ಅತ್ಯಂತ ಸ್ವಚ್ಛವಾಗಿವೆ ಎಂದು ಯಾವ ಮೂರ್ಖನೂ ಹೇಳಲಾರ. ಆದರೆ ಆ ಎಲ್ಲ ಬೆಲೆಗಳೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ,ಅದೂ ಈ ದೇಶ ಸ್ವಾತಂತ್ರ್ಯವನ್ನು ಪಡೆದ ಮುಂಜಾವಿನಲ್ಲೇ ತಟಕ್ಕನೆ ತಲೆಕೆಳಗಾದುವೆಂದು ಯಾರೂ ಒಪ್ಪಲಾರರು. ಇಂಗ್ಲೆಂಡಿನಲ್ಲಿ ಎರಡನೇ ಮಹಾಯುದ್ಧದ ಅನಂತರ, ಜನಜೀವನದಲ್ಲಿ ಎಲ್ಲ ಬೆಲೆಗಳೂ ತಲೆಕೆಳಕಾಗಿ ಯಾವ ಒಂದು ಬಗೆಯ ರಿಕ್ತಾವಸ್ಥೆ ಪ್ರಾಪ್ತವಾಯಿತೋ, ಅದೇ ಪರಿಸ್ಥಿತಿ ಇಲ್ಲೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಾಪ್ತವಾಯಿತೆಂದು

* ಈ ಮಾತಿನ ಅರ್ಥ ಹಿಂದಿನಿಂದ ಇಂದಿನತನಕ ಎಲ್ಲ ಕನ್ನಡ ಕವಿಗಳೂ ಸಮಕಾಲೀನ ಪ್ರಜ್ಞೆಯನ್ನು ತಮ್ಮ ಕಾವ್ಯಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ ಎಂದು ಅಲ್ಲ; ಇದರ ಮೇಲೆ "ಸಮಕಾಲೀನ ಪ್ರಜ್ಞೆ"—ಯೊಂದೇ ಕಾವ್ಯದ ಬೆಲೆಯನ್ನು ಅಳೆಯುವ ಮಾನದಂಡವೂ ಅಲ್ಲ. ಕಾವ್ಯ ನಿಜವಾದ ಕಾವ್ಯವಾಗಬೇಕಾದರೆ ಅತ್ಯಗತ್ಯವಾಗಿ ಇರಲೇಬೇಕಾದ ಅಂಶಗಳಲ್ಲಿ ಅದೂ ಒಂದು.

ಭಾವಿಸಿದರು, ಅಥವಾ ಪ್ರಾಪ್ತವಾಗಿದೆ ಎಂದು ಭ್ರಮಿಸಿದರು, ಅಥವಾ ಪ್ರಾಪ್ತವಾಗಬೇಕೆಂದು ಭಾವಿಸಿದರು—ತಮ್ಮ ಕಾವ್ಯ ನಿರ್ಮಿತಿಯಸಲುವಾಗಿ ! ಇದರಿಂದ ಕಾವ್ಯದ ವಸ್ತುವಿನಲ್ಲಿ ಅತೃಪ್ತಿ, ನೈರಾಶ್ಯ, ಮೌಲ್ಯಗಳ ವೈಪರೀತ್ಯ, ವಿಕೃತಿ, ಜಿಗುಪ್ಸೆ ಇವುಗಳೇ ಪ್ರಧಾನವಾದ ಅಂಶಗಳಾದುವು. ಈ ಮನೋಧರ್ಮ ಈ ರೀತಿ ಆದುದಕ್ಕೆ ಕಾರಣವನ್ನು ಹೀಗೂ ಊಹಿಸಬಹುದು : ನವ್ಯ ಕಾವ್ಯ ಒಂದು ರೀತಿಯಲ್ಲಿ ಪ್ರಧಾನವಾಗಿ ನಾಗರಿಕ ಕಾವ್ಯ ; ಎಂದರೆ ನಗರ ಜೀವನ, ಅಲ್ಲಿ ಕಂಡುಬರುವ ಅವ್ಯವಸ್ಥೆ ಇತ್ಯಾದಿಗಳನ್ನು ನಿರೂಪಿಸತಕ್ಕದ್ದು. ನಗರದಲ್ಲಿ ಕಾಣುವ ತರಾತುರಿ, ನಿರುತ್ಸಾಹ, ಅರ್ಧವಿದ್ಯಾವಂತರ ಭಾವನೆಗಳಲ್ಲಿ ಕಂಡುಬರುವ ಅಪಕ್ವವಿಚಾರ ಸರಣಿ, ಅಂಥವರಲ್ಲಿ ಕಂಡುಬರುವ ನೈರಾಶ್ಯ, ಯಂತ್ರ ವಿಜ್ಞಾನದಿಂದ ಉಂಟಾದ ಯಾಂತ್ರಿಕತೆ, ರಾಜಕೀಯದ ದುಷ್ಪರಿಣಾಮಗಳಿಗೆ ಒಳಗಾದವರ ಆರ್ತತೆ–ಇತ್ಯಾದಿಗಳನ್ನು ನವ್ಯಕಾವ್ಯ ತನ್ನ ಮೂಲಸಾಮಗ್ರಿಯನ್ನಾಗಿ ಮಾಡಿಕೊಂಡಿತು. ಇದು ಸಮಕಾಲೀನ ಜೀವನವೇ, ಆದರೆ ಇದೇ ಸಮಕಾಲೀನ ಜೀವನದ ಸರ್ವಸ್ವವೂ ಅಲ್ಲವಲ್ಲ. ನಗರದಲ್ಲೇ ಇರತಕ್ಕ ಎಲ್ಲರ ಮನೋಧರ್ಮವೂ ಹೀಗೇ ಇದೆ ಎಂದೇನೂ ಇಲ್ಲ. ಭಾರತದ ಚಿರಂತನ ಪರಂಪರೆಯನ್ನು ಅರಗಿಸಿಕೊಂಡ ಬೇರೆಬೇರೆಯ ಕವಿಗಳೂ ನಗರದಲ್ಲಿದ್ದಾರೆ ಎಂಬುದನ್ನು ಮರೆಯಬಾರದು. ಆದರೆ ವಾಸ್ತವವಾಗಿ ಅಖಂಡ ಭಾರತದ ಜನತೆ ಇರತಕ್ಕದ್ದು ಸಹಸ್ರಾರು ಹಳ್ಳಿಗಳಲ್ಲಿ ; ಕವಿ ಈ ಕೆಲವು ನಗರಗಳಲ್ಲಿ, ಕೆಲವು ಜನದಲ್ಲಿ ಕಂಡ ಬದುಕು ಅಸಂಖ್ಯವಾದ ಹಳ್ಳಿಗಳಲ್ಲಿ ಇರುವ ಭಾರತದ ಹೃದಯಸರ್ವಸ್ವವೂ ಅಲ್ಲ. ಅಜ್ಞಾತವಾದ ಆ ಜನಕೋಟಿಯ ಹೃದಯದ ನಿಜವಾದ ಭಾವನೆಗಳ ಮೊತ್ತ ಏನೆಂಬುದನ್ನು ನಮ್ಮ ಪರಂಪರೆ ಹೇಳುತ್ತದೆ ; ಅಷ್ಟೇ ಏಕೆ ಅಕಸ್ಮಾತ್ತಾಗಿ ಸಂಧಿಸಿದ ಯಾವ ಹಳ್ಳಿಯವನಾದರೂ ಹೇಳುತ್ತಾನೆ ನಿಜವಾದ ಭಾರತದ ಮನಸ್ಸು ಆದರ ಆಶೋತ್ತರಗಳನ್ನು, ಅಲ್ಲಿನ "ಸಮಕಾಲೀನ ಪ್ರಜ್ಞೆ"ಯನ್ನು ಅರಿಯಬೇಕಾದರೆ ಅಲ್ಲಿ ನೋಡಬೇಕು. ಆಗ ಗೊತ್ತಾಗುತ್ತಿತ್ತು, ಬದುಕಿನ ಮೌಲ್ಯಗಳು ಸ್ವಚ್ಛವಾಗಿಲ್ಲದೆ ಹೋದರೂ, ನಗರದ ಕವಿಗಳು ಭಾವಿಸಿರುವಂತ ಎಲ್ಲವೂ ತಲೆಕೆಳಕಾಗಿ, ನಿರುತ್ಸಾಹ ರಿಕ್ತತೆಗಳೇ ತುಂಬಿಕೊಂಡಿಲ್ಲ ಎನ್ನುವುದು. ಇದು ಹೇಗೇ ಇರಲಿ ನಗರ ಜೀವನವನ್ನು ಅತ್ಯಂತ ನವೀನ ಪ್ರತಿಮೆಗಳಲ್ಲಿ ಯಶಸ್ವಿಯಾಗಿ ಚಿತ್ರಿಸುವುದರ ಮೂಲಕ ನವ್ಯಕವಿಗಳು ಹೊಸಹಾದಿಯನ್ನು ತೆರೆದರು.

ಪ್ರತಿಯೊಬ್ಬ ಲೇಖಕನೂ ವಿಶಿಷ್ಟತೆಯನ್ನು ಅಥವ ತನ್ನತನವನ್ನು ಪಡೆದುಕೊಳ್ಳುವುದು ಎರಡು ರೀತಿಯಲ್ಲಿ: ಒಂದು ತನ್ನನ್ನು ತಾನು ಅನ್ಯಕವಿಗಳ ಪ್ರಭಾವದಿಂದ ಬಿಡಿಸಿಕೊಂಡು ತನ್ನದೇ ಆದ ಮನೋಧರ್ಮವನ್ನೂ ಅಭಿವ್ಯಕ್ತಿಯನ್ನೂ ಕಂಡುಕೊಳ್ಳುವುದು. ಎರಡು, ಅನ್ಯಪರಂಪರೆಯ ಪ್ರಭಾವದಿಂದ ಬಿಡುಗಡೆ ಮಾಡಿಕೊಳ್ಳುವುದು ಅಥವಾ ತನ್ನ ಆವರಣದ, ತನ್ನ ಕಾಲದ, ತನ್ನ ಪರಂಪರೆಯ, ಒಟ್ಟಿನಲ್ಲಿ ತನಗೆ ಮೂಲಭಿತ್ತಿಯಾದ 'ಸಮಷ್ಟಿ'ಯ ಪ್ರಜ್ಞೆಯನ್ನು ಪಡೆಯುವುದು. ಎಂದರೆ ಬೇರೆಯ ಕವಿಗಳಿಂದಾಗಲಿ, ಬೇರೆಯ ಪರಂಪರೆಯಿಂದಾಗಲೀ ಉತ್ತಮವಾದ ಅಂಶಗಳನ್ನು ಸ್ವೀಕರಿಸಬಾರದೆಂದೇನೂ ಅಲ್ಲ; ಆದರೆ ಹಾಗೆ ತೆಗೆದುಕೊಂಡದ್ದು ತನ್ನ ವ್ಯಕ್ತಿತ್ವದಲ್ಲಿ ಅರಗಿ, ತನ್ನತನದ ಬೆಳವಣಿಗೆಗೆ, ಪ್ರಕಾಶನಕ್ಕೆ ನೆರವಾದರೆ ಅದೂ ಒಳ್ಳೆಯದೇ. ವಾಸ್ತವವಾಗಿ ಪ್ರಯೋಗಶೀಲನಾದ ಕವಿ ಇಂಥ ಪ್ರಭಾವ–ಪ್ರಚೋದನೆಗಳನ್ನು ಧಾರಾಳವಾಗಿ ಸ್ವಾಗತಿಸುತ್ತಾನೆ. ಸಾಹಿತ್ಯದಲ್ಲಿ ಕಂಡುಬರುವ ಪ್ರಗತಿ, ನೇರವಾಗಿ ತನ್ನ ಸಮಕಾಲೀನ ಜೀವನದ ಒತ್ತಡದಿಂದ ಆಗಬಹುದು, ಇಲ್ಲವೇ ಬೇರೊಂದು ಸಾಹಿತ್ಯ ಪರಂಪರೆಯ ಪ್ರಚೋದನೆಯಿಂದ ಆಗಬಹುದು. ತನ್ನ ಕಾಲದ ಜೀವನದ ಒತ್ತಡದಿಂದ ಮೂಡಿದ ನೂತನ ಪ್ರಯೋಗ ಅತ್ಯಂತ ಸಹಜವಾಗಿಯೆ ಇರುತ್ತದೆ; ಆದರೆ ಕೆಲವು ಸಲ ಬೇರೊಂದು ಪರಂಪರೆಯ ಪ್ರಚೋದನೆಯಿಂದ ರೂಪುಗೊಂಡ ಕಾವ್ಯ, ಹಾಗೆ ತಾನು ಪ್ರಚೋದನೆ ಪಡೆದ ಆ ಪರಂಪರೆಯ ಹಿಂದಿನ ಮನೋಧರ್ಮವನ್ನು ತನ್ನ ಪರಂಪರೆಗೆ ಅದು ಒಗ್ಗಲಿ–ಬಿಡಲಿ, ತಾನು ಪ್ರಯೋಗಕ್ಕಾಗಿ ಯಥಾವತ್ತಾಗಿ ಸ್ವೀಕರಿಸುತ್ತೇನೆ ಎಂದು ಹೊರಟಾಗ, ಅಂಥ ಪ್ರಯೋಗ, ಪ್ರಯೋಗದ ದೃಷ್ಟಿಯಿಂದ ಯಶಸ್ವಿಯಾದರೂ, ಪರಂಪರೆಯ ದೃಷ್ಟಿಯಿಂದ ತಕ್ಕಮಟ್ಟಿಗೆ ವಿದೇಶೀಯವಾಗಿಯೇ ನಿಂತೀತು. ಹತ್ತು ವರ್ಷಕ್ಕೂ ಹಿಂದೆ ಕನ್ನಡದಲ್ಲಿ ರೂಪುಗೊಂಡ ನವ್ಯ ಕಾವ್ಯಕ್ಕೆ ಈ ಮಾತು ಅಕ್ಷರಶಃ ಅನ್ವಯಿಸುತ್ತದೆ. ನವೋದಯ ಕಾವ್ಯದಿಂದ, ನವ್ಯ ಕಾವ್ಯದ ಕಡೆಗೆ ನಮ್ಮ ಕವಿಗಳ ಕಣ್ಣು ಹೊರಳಿದಾಗ, ಅವರಿಗೆ ಪ್ರಧಾನವಾದ ಪ್ರಚೋದನೆ ಒದಗಿದ್ದು ಪಶ್ಚಿ

ಮದಿಂದ, ಅದೂ ಟಿ. ಎಸ್. ಎಲಿಯಟ್‌ನ ಕಾವ್ಯ ಪರಂಪರೆಯಿಂದ — ಎಂಬುದನ್ನು ಒಪ್ಪಿಕೊಳ್ಳಬೇಕು. ಎಲಿಯಟ್‌ನ ಕಾವ್ಯವನ್ನು ಓದಿ, ಅದರ ನಾವೀನ್ಯತೆಗೆ ಬೆರಗಾಗಿ, ಕೆಲವು ವ್ಯಕ್ತಿಗಳು ಪ್ರಯೋಗದಲ್ಲಿ ತೊಡಗಿದ್ದರಿಂದ ನವ್ಯಕಾವ್ಯ ಆವಿರ್ಭವಿಸಿತೇ ಹೊರತು, ಇಲ್ಲಿನ ಜನಜೀವನದ ಆಂತರಿಕ ಒತ್ತಡಗಳ ಕಾರಣದಿಂದ ಅಲ್ಲ; ಈ ಪ್ರಯೋಗ ಅಕಾಲಿಕವೆಂದಾಗಲೀ, ಅಸಾರ್ಥಕವೆಂದಾಗಲೀ ಯಾರೂ ಹೇಳಲಾರರು. ಪ್ರಯೋಗವಂತೂ ಅತ್ಯಂತ ಅಗತ್ಯವಾಗಿತ್ತು. ಆದರೆ ಈ ಪ್ರಯೋಗದಲ್ಲಿ ಒಂದು ಪ್ರಮಾದವಾಯಿತು. ಅದು ಈ ಕಾವ್ಯದಲ್ಲಿ ವ್ಯಕ್ತಗೊಂಡ ಮೂಲ ಮನೋಧರ್ಮ, ಮತ್ತು ಅದರ ಸಮರ್ಥನೆಗಾಗಿ ತಯಾರಾದ ಹಸಿಹಸೀ ಸಿದ್ಧಾಂತಗಳು. ಎಲಿಯಟ್‌ನ ಕಾವ್ಯದಿಂದ ಪ್ರಚೋದಿತವಾಗಿ, ಅಲ್ಲಿನ ರೀತಿ, ತಂತ್ರವೈವಿಧ್ಯ ಇತ್ಯಾದಿಗಳನ್ನು ನಮ್ಮಲ್ಲಿ ತಂದದ್ದು ಅತ್ಯಂತ ಸ್ವಾಗತಾರ್ಹ; ಆದರೆ ಇಲ್ಲಿ ರೂಪುಗೊಂಡ ಕಾವ್ಯವೂ 'ಭಾವ'ದಲ್ಲಿ ಅಲ್ಲಿನ ಮನೋಭಾವವನ್ನೇ ಯಥಾವತ್ತಾಗಿ ಅನುಕರಿಸಿದ್ದು ವಿಷಾದನೀಯ. ಅಲ್ಲಿನವರ ರೀತಿ ನಮ್ಮವರ ಭಾವ ಈ ಎರಡರ ಒಂದು ಸಮನ್ವಯವಾಗಿ ರೂಪುಗೊಂಡಿದ್ದರೆ ಅದರ ರಾಜಮಾರ್ಗವೇ ಬೇರೆಯಾಗುತ್ತಿತ್ತೋ ಏನೋ. ಹಾಗಾಗದೆ ಹೋದುದರಿಂದಲೇ ನವ್ಯಕಾವ್ಯದ ಭಾವಸಾಮಗ್ರಿಯಲ್ಲಿ ಕಂಡುಬಂದ ಆ ನಿರಾಸೆ, ವಿಕೃತಿ, ತುಮುಲ, ಆಂತರಿಕ ರಿಕ್ತತೆ ಇತ್ಯಾದಿಗಳೆಲ್ಲವೂ ಆಗತಾನೆ ಸ್ವಾತಂತ್ರ್ಯವನ್ನು ಪಡೆದು ಉದಯೋನ್ಮುಖವಾಗುತ್ತಿದ್ದ ರಾಷ್ಟ್ರದ ಉತ್ಸಾಹಪೂರ್ಣ ಮನೋಧರ್ಮಕ್ಕೆ ಸಂಪೂರ್ಣ ವಿರುದ್ಧವಾಗಿ ಅಪಸ್ವರದಂತೆ ಭಾಸವಾಯಿತು. ಇಂಗ್ಲೆಂಡಿನಲ್ಲಿ ನವ್ಯಕಾವ್ಯ ಹುಟ್ಟಿಕೊಳ್ಳಲು ಯಾವ ಒಂದು ಮನೋಭಾವ ಅಂದಿನ ಜನ ಜೀವನದಲ್ಲಿಯೇ ಅನಿವಾರ್ಯವಾಗಿ ಪ್ರಾಪ್ತವಾಯಿತೋ, ಅದೇ ಮನೋಭಾವ ಅಂದು ಎಚ್ಚೆತ್ತ ಭಾರತದಲ್ಲಿ ಪ್ರಾಪ್ತವಾಗಿರಲಿಲ್ಲ. ಹೀಗಾಗಿ ಸ್ವಾತಂತ್ರ್ಯದ ಅರುಣೋದಯ ಕಾಲದಲ್ಲೇ, ನವ್ಯಕವಿಗಳು ಮುಂಗಡವಾಗಿಯೇ ತೋಡಿಕೊಂಡ ಅತೀವ ನಿರಾಸೆ, ನಿರುತ್ಸಾಹ, ತುಮುಲ, ವಿಕೃತಿ ಮೊದಲಾದ ಭಾವನೆಗಳು ತೀರಾ ಅಕಾಲಿಕವಾಗಿದ್ದುವು. ಇದರಿಂದ ನವ್ಯಕಾವ್ಯ ಉದಯವಾದ ಕಾಲದಲ್ಲಿ ಅದರ ಮೂಲಭಾವನಾ ಸಾಮಗ್ರಿ ವಾಸ್ತವವಾಗಿ ಅಂದಿನ ಜನಮನೋಧರ್ಮದೊಂದಿಗೆ ಸಾಮರಸ್ಯವನ್ನು ಪಡೆಯಲಿಲ್ಲ. ಆದರೂ ನವೋದಯ ಕಾವ್ಯಕ್ಕೆ ಒಂದು ಪ್ರತಿಕ್ರಿಯೆಯಾಗಿ, ಒಂದು ನೂತನ ಪ್ರಯೋಗವಾಗಿ ಬಂದದ್ದು ಅತ್ಯಂತ ಸಂತೋಷದ ಸಂಗತಿ. ಬರೆಯುವ ದಾರಿಯಲ್ಲಿ, ನೋಡುವ ದೃಷ್ಟಿಯಲ್ಲಿ ಹೊಸತನವನ್ನು ಅದು ತಂದುಕೊಟ್ಟಿತು. ರೀತಿ ಮತ್ತು ತಂತ್ರದ ದೃಷ್ಟಿಯಿಂದಲಂತೂ ನವ್ಯಕಾವ್ಯದ ಸಾಧನೆ ಮಹತ್ವಪೂರ್ಣವಾದದ್ದು. ಪೂರ್ವದಿಂದ, ಪಶ್ಚಿಮದಿಂದ, ಒಳಗಿನಿಂದ, ಹೊರಗಿನಿಂದ, ಪ್ರಕೃತಿಯಿಂದ, ವಿಕೃತಿಯಿಂದ ನೂರುದಿಕ್ಕಿಗೆ ತನ್ನ ಅನ್ವೇಷಣೆಯ ಕೈಚಾಚಿ ಅದು ನಿರ್ಮಿಸಿದ ಪ್ರತಿಮೆಗಳ ಉತ್ಸವ ಅತ್ಯಂತ ವೈವಿಧ್ಯಪೂರ್ಣವಾಗಿದೆ. ಕಾವ್ಯ ಬರೆಯುತಕ್ಕವರಲ್ಲಿ ಅದು ಒಂದು ರೀತಿಯ ವಿಚಾರಶೀಲತೆಯನ್ನೂ, ಸ್ವವಿಮರ್ಶನ ಪ್ರಜ್ಞೆಯನ್ನೂ, ನಿರ್ದಾಕ್ಷಿಣ್ಯಪ್ರವೃತ್ತಿಯನ್ನೂ, ನವೀನ ಅನ್ವೇಷಣಾ ಮನೋಧರ್ಮವನ್ನೂ ತುಂಬಿತು; ಎಲ್ಲಕ್ಕಿಂತಲೂ ಮಿಗಿಲಾದುದು ಎಂದರೆ ಕಾವ್ಯದ ಭಾಷೆ ಜನದ ಆಡುಮಾತಿಗೆ ಹತ್ತಿರವಾಗಬೇಕು ಎನ್ನುವ ಬಹುಕಾಲದ ಪ್ರಯತ್ನ ಮತ್ತು ಹಾರೈಕೆಗಳನ್ನು ಅತ್ಯಂತ ಯಶಸ್ವಿಯಾಗಿ ನೆರವೇರಿಸಿತು.

ನಿಜ; ನವ್ಯಕಾವ್ಯ ಜನದ ಆಡುಮಾತಿನ ಸಮೀಪಕ್ಕೇನೋ ಬಂದಿತು; ಆದರೆ ಓದುಗರಿಂದ ದೂರ ಸರಿಯಿತು! ಈ ಕಾವ್ಯವನ್ನು ಕುರಿತು ಜನ ಸಾಮಾನ್ಯವಾಗಿ ಹೇಳುವ ಮಾತು ಇದು: ಏನು ಕವಿತೆಯೋ ಇದು! ಸ್ವಲ್ಪವೂ ಅರ್ಥವಾಗುವುದಿಲ್ಲ. ಅರ್ಥವಾಗಿದೆ ಎಂದು ಹೇಳುವ ಎಷ್ಟೋ ಜನ ಬುದ್ಧಿವಂತರಿಗೂ ಇದು ಅರ್ಥವಾಗಿದೆಯೋ ಇಲ್ಲವೋ! ಒಬ್ಬ ಕವಿ ಬರೆದುದು ಓದುವ ಜನಕ್ಕೆ ಅರ್ಥವಾಗದಿದ್ದರೆ ಹೋಗಲಿ; ಮತ್ತೊಬ್ಬ ಕವಿಗೂ ಅರ್ಥವಾಗುವುದಿಲ್ಲವಲ್ಲ. ಅಷ್ಟೇ ಏಕೆ, ಬರೆದವನಿಗೂ ಅದರ ಅರ್ಥ ಗೊತ್ತೋ ಇಲ್ಲವೋ!

ಹಿಂದಿನ ಕಾವ್ಯ, ಅದು ಬಳಸುವ ಭಾಷೆಯಲ್ಲಿ ಒಮ್ಮೊಮ್ಮೆ ಕ್ಲಿಷ್ಟವಾಗಿರುವಂತೆ ತೋರಿದರೂ, ಸ್ವಲ್ಪ ಕ್ಲಿಷ್ಟವಾಗಿರುವಂತೆ ತೋರಿದರೂ, ಸ್ವಲ್ಪ ಶ್ರಮಪಟ್ಟ ಸಹೃದಯನಿಗೆ ಅರ್ಥವಾಗದೇ ಇರುತ್ತಿರಲಿಲ್ಲ. ಆದರೆ ನವ್ಯಕಾವ್ಯವಾದರೋ ಭಾಷೆಯಲ್ಲಿ ಅತ್ಯಂತ ಸರಳವಾದರೂ, ಅದರ ಸಾಂಕೇತಿಕ ಹಾಗೂ ವಿಚಿತ್ರ ತಂತ್ರವಿಧಾನಗಳಿಂದ ಮತ್ತು ವಸ್ತು ವೈಪರೀತ್ಯದಿಂದ ತಕ್ಕಮಟ್ಟಿಗೆ ಓದುಗರಿಗೆ ಅಗಮ್ಯವಾಗಿಯೇ ಇದೆ. ಇದನ್ನು ಬರೆಯುವ ಕವಿಗಳು ಓದುಗರಿಂದ ಹೆಚ್ಚಿನ ಪರಿಶ್ರಮವನ್ನು ನಿರೀಕ್ಷಿಸುತ್ತಾರೆ. ಅಷ್ಟೇ ಅಲ್ಲ, ತಮ್ಮ ಈ ಕಾವ್ಯ

ಕೆಲವೇ ಮಂದಿ ಪ್ರಜ್ಞಾವಂತರಾದ ಬುದ್ಧಿಜೀವಿಗಳಿಗೆ—ಎಂಬ ಮಾತನ್ನು ಕೆಲವರು ಹೇಳಿದರು, ನಿಜ. ಕಾವ್ಯವನ್ನು "ಜನಕ್ಕಾಗಿ ಬರೆಯುತ್ತೇನೆ" ಎಂದು ಯಾವ ಕವಿ ಹೇಳಿದರೂ, ಅದು ಎಲ್ಲರ ಸಮಾರಾಧನೆಯ ವಸ್ತು ಅಲ್ಲ, ಕಾವ್ಯಾಸ್ವಾದ ರಸಿಕರಾದ ಕೆಲವರಿಗೆ—ಎಂದೇ ಅರ್ಥ. ಆದರೆ ನವ್ಯಕಾವ್ಯ ಬರೆದವರ ಮನೋಧರ್ಮವೇ ಬೇರೆ. ಅವರು ಹೇಳಿದರು : ಈ ಕಾವ್ಯ ಕೆಲವೇ "ಬುದ್ಧಿಜೀವಿ"ಗಳಿಗೆ ಎಂದು. ಅಷ್ಟೇ ಅಲ್ಲ, ತಮ್ಮ ಕಾವ್ಯ ಅರ್ಥವಾಗಲಿಲ್ಲ ಎನ್ನುವವರ ಬುದ್ಧಿಯ ಮಟ್ಟವೇ ಕಡಮೆ ಎನ್ನುವ ಧೋರಣೆಯನ್ನು ಪ್ರಕಟಿಸಲು ಅವರು ಹಿಂಜರಿಯಲಿಲ್ಲ. ಇದರಿಂದ ನವ್ಯಕಾವ್ಯವನ್ನು ಓದತಕ್ಕವರ ಸಂಖ್ಯೆ ಪರಿಮಿತವಾಗಿ ಅದರ ಸಹೃದಯರು ಕೆಲವೇ ಕೆಲವರಾಗಿ ಒಂದು ಸಣ್ಣ ಗುಂಪಾದರು. ಈ ರೀತಿ ಪ್ರತ್ಯೇಕವಾಗುವ ನವ್ಯಕಾವ್ಯದ ಸಹೃದಯ ದೀಕ್ಷಿತ ವಲಯ ಮನೋಭಾವವೂ (*esoterism*) ಎಲಿಯಟ್‌ನ ಕಾವ್ಯದ ಜೊತೆಗೇ ಪಶ್ಚಿಮದಿಂದ ಬಂದದ್ದು. ಇಂಗ್ಲೆಂಡಿನಲ್ಲಿ ಆರಂಭವಾದ ನವ್ಯಕಾವ್ಯವೂ ಉದ್ದೇಶಪೂರ್ವಕವಾಗಿಯೇ ಇಂಥ ಒಂದು ಪ್ರತ್ಯೇಕ ಸಹೃದಯ ವರ್ಗವನ್ನು ನಿರ್ಮಿಸಿಕೊಂಡಿತು. ಸರಿ ; ಅದರ ಅನುಕರಣ ಇಲ್ಲಿಯೂ ಮೈದೋರಿತು. ಓದುಗರ ಅದರ ಅನುಕರಣ ಇಲ್ಲಿಯೂ ಮೈದೋರಿತು. ಓದುಗರ ಬುದ್ಧಿಯನ್ನು ಬಳಲಿಸಿ. ಅದರ ಮೂಲಕ ತನ್ನ ಅಗ್ಗಳಿಕೆಯನ್ನು ಸ್ಥಾಪಿಸಿಕೊಳ್ಳುವ ಚಾಪಲ್ಯ, ನವ್ಯವೆನಿಸಿಕೊಂಡ ಹಲವು ಪ್ರಕಾರದ ಬರವಣಿಗೆಗಳಲ್ಲಿ ಕಾಣಿಸಿಕೊಂಡಿತು. ಸಹೃದಯರ ಬುದ್ಧಿಶಕ್ತಿಯನ್ನೇ ಶಂಕಿಸುವ ಪ್ರಶ್ನಿಸುವ ಈ ಪರಂಪರೆ ಕನ್ನಡಕ್ಕೆ ತೀರಾ ಹೊಸತು ಎನ್ನುವ ಭಾವನೆ ಹಲವರಲ್ಲಿ ಮೂಡಿತು. ಯಾವ ಕವಿಯೇ ಆಗಲಿ, ಯಾವ ಪರಂಪರೆಯೇ ಆಗಲಿ ಸಹೃದಯರನ್ನು ಗೌರವದಿಂದ ಕಂಡುಕೊಳ್ಳಬೇಕು. ಕವಿ ತನ್ನ ಕಾವ್ಯ ಆಸ್ವಾದಿಸಲ್ಪಡುವಂತಹ ಅಭಿರುಚಿಯನ್ನು ಓದುಗರಲ್ಲಿ ಉಂಟು ಮಾಡಬೇಕು. ಸಾವಿರಾರು ವರ್ಷಗಳಿಂದ ಬಂದ ಕಾವ್ಯವನ್ನು ಓದಿ ಅರ್ಥಮಾಡಿಕೊಳ್ಳಬಲ್ಲವರು, ಈ ಮೂರು ನಾಲ್ಕು ದಶಕಗಳಲ್ಲಿ ಬಂದ ನವೋದಯ ಕಾವ್ಯವನ್ನು ಆಸ್ವಾದಿಸಬಲ್ಲವರು, ಆಧುನಿಕವಾದ ಶಿಕ್ಷಣವನ್ನು ಪಡೆದವರು, ಹತ್ತು–ಹನ್ನೆರಡು ವರ್ಷದಿಂದ ಈಚೆಗೆ ಬಂದ ಕಾವ್ಯದ ವಿಚಾರದಲ್ಲಿ ತಟಕ್ಕನೆ 'ದಡ್ಡ'ರಾಗಿ ಬಿಟ್ಟರೆಂದೂ, ಈ ಹೊಸ ಕಾವ್ಯವನ್ನು ಓದಬಲ್ಲವರು ತಟಕ್ಕನೆ ಬುದ್ಧಿವಂತರಾಗಿ ಬಿಟ್ಟರೆಂದೂ ಭಾವಿಸುವುದು ಎಷ್ಟು ವಿಚಿತ್ರ ! ಇದರಿಂದ ಕಾವ್ಯದಿಂದ ಸಹೃದಯರು ದೂರವಾಗುವುದಿರಲಿ, ಒಬ್ಬ ಕವಿ ಮತ್ತೊಬ್ಬ ಕವಿಯಿಂದ ದೂರವಾಗಿ, ಕಾವ್ಯ ವಿಚಾರ ವಿಮರ್ಶೆಗಳಿಗೆ ತಕ್ಕ ಆವರಣವಿಲ್ಲದೆ, ಸಣ್ಣ ಪುಟ್ಟ "ಪಂಥ"ಗಳಾಗಿ ಹೋಗಿರುವುದು ವಿಷಾದದ ಸಂಗತಿ.

ಕನ್ನಡದ ಸುದೈವ; ಈಗಾಗಲೇ ಮೊದಲಿನಿಂದಲೂ ಈ ಗೊಂದಲಗಳಿಂದ ವಿಚಲಿತರಾಗದೆ ಕಾವ್ಯ ಬರೆಯುತ್ತಿರುವವರ ಜೊತೆಗೆ, ಈಗ ಮೂರು ನಾಲ್ಕು ವರ್ಷಗಳಿಂದ ಕೆಲವು ತರುಣ ಲೇಖಕರಲ್ಲಿ ಸಮನ್ವಯದೃಷ್ಟಿ ರೂಪಿತವಾಗುತ್ತಿದೆ. ಮೊದಲಿನ ಆವೇಶ-ರಭಸಗಳು ತಗ್ಗಿ ಹಳದು-ಹೊಸದರ ಒಂದು ಬೆಸುಗೆ ರೂಪಿತವಾಗುತ್ತಿದೆ. ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ಗಿರಡ್ಡಿ ಗೋವಿಂದರಾಜ, ಸಿದ್ದಲಿಂಗಯ್ಯ, ನಿಸಾರ್ ಅಹಮದ್—ಇಂಥ ತರುಣ ಕವಿಗಳಲ್ಲಿ ಈ ಹೊಸ ಸ್ವರ ಕೇಳಿಸುತ್ತಿದೆ. ವಿಕೃತಿ, ವೈಪರೀತ್ಯಗಳು ಕಡಿಮೆಯಾಗಿ,ಬದುಕಿನ ಬೇರೆ ಬೇರೆ ಮುಖದ ಆಳವಾದ ನಿರೀಕ್ಷೆ, ಶೈಲಿಯಲ್ಲಿ ಖಾರವಲ್ಲದ ಒಂದು ಹದ ಇವು ಮೈದೋರುತ್ತಿವೆ. ನವೋದಯ ಕಾಲದ ರೋಮಾಂಚಕಾರಿಯಾದ ಉತ್ಸಾಹವಾಗಲಿ, ನವ್ಯಕಾವ್ಯಾರಂಭ ಕಾಲದ ಆವೇಶ— ರಭಸಗಳಾಗಲೀ ಎರಡೂ ಈಗ ಇಲ್ಲ. ಕವಿಗಳೂ, ಓದುಗರೂ ಮತ್ತು ವಿಮರ್ಶಕರೂ ಒಂದು ರೀತಿಯ ವಿಚಾರಶೀಲ ಮೌನದಲ್ಲಿರುವಂತೆ ತೋರುತ್ತದೆ. ಒಟ್ಟಿನಲ್ಲಿ ಎಲ್ಲವನ್ನೂ ಅಳೆದು ತೂಗುವಂಥ ಮನೋಧರ್ಮಕ್ಕೆ ಉಚಿತವಾದ ಒಂದು ಸಂಧ್ಯಾಸ್ತಬ್ಧತೆ ಆವರಿಸಿದಂತಿದೆ. ಈ ನಡುವೆ ಶ್ರೀ ದಿನಕರ ದೇಸಾಯಿ ಅವರ ಚುಟುಕಗಳು ಯಾರ ಕಣ್ಣನ್ನಾದರೂ ಸೆಳೆಯುತ್ತಿವೆ. ಭಾಷೆಯ ಹದ, ಮಾತಿನ ಮೊನಚು, ಧ್ವನಿಯ ಕೊಂಕು, ಅವುಗಳಲ್ಲಿ ಅಪೂರ್ವವಾಗಿವೆ. ಬಹುಶಃ ಕನ್ನಡದಲ್ಲಿ ಇಷ್ಟೊಂದು ಮುಕ್ತಕಗಳು ಎಂದೂ ನಿರ್ಮಾಣವಾದಂತಿಲ್ಲ. ಇಂಥ ಒಂದು ಮುಕ್ತಕ ಪ್ರಕಾರವನ್ನು ಬೆಳೆಯಿಸಿದ ಕೀರ್ತಿ ಶ್ರೀ ದೇಸಾಯಿಯವರಿಗೆ ಸಲ್ಲುತ್ತದೆ. ಆದರೆ ಈ ಮುಕ್ತಕಗಳ ಪ್ರಧಾನ ವಸ್ತು ಕೇವಲ ರಾಜಕೀಯ ವಿಡಂಬನೆಯೊಂದೇ ಆಗಿರುವುದು ಅವುಗಳಿಗೆ ಒಂದು ಮಿತಿಯನ್ನು ಕಲ್ಪಿಸಿದಂತಾಗಿದೆ. ಈ ಮುಕ್ತಕ ಪರಂಪರೆ ಸಾರ್ವಕಾಲಿಕವಾದ ಹಾಗೂ ಗಂಭೀರವಾದ ವಸ್ತು ವೈವಿಧ್ಯವನ್ನು ತಳೆದ ಒಳ್ಳೆಯದು

ಅವುಗಳಲ್ಲೆ ಏಕೆ, ಇಂದಿನ ಕನ್ನಡ ಕಾವ್ಯದ ಕೆಲವು ಕವಿಗಳ ಪ್ರಧಾನ ವಸ್ತುವೆ 'ವಿಡಂಬನೆ' ಎನ್ನಬಹುದು.

ಅದರಲ್ಲೂ ಕೇವಲ ರಾಜಕೀಯ ವಿಡಂಬನೆಯೊಂದೇ ಬಹುಮಟ್ಟಿಗೆ ರಂಜಕ ಸಾಮಗ್ರಿಯಾಗಿದೆ. ಇದರಿಂದ ಈ ಕಾವ್ಯ ಬಹು ಜನಕ್ಕೆ ಪ್ರಿಯವಾಗುತ್ತಿರುವುದು ಕಾವ್ಯೇತರ ಕಾರಣಗಳಿಂದಲೇ ಹೊರತು ಅದರ ಕಾವ್ಯಾಂಶಗಳಿಂದ ಇರಲಾರದು. ಹೀಗಾಗಿ ಈ ವಿಡಂಬನ ಕಾವ್ಯ, ಏಕಮುಖತೆಯನ್ನೂ, 'ದೇಶ ಕಾಲ ವಿಶೇಷಾ ವೇಶ'ವನ್ನೂ, ವ್ಯಕ್ತಿ ಸಂಪರ್ಕವನ್ನೂ ನೀಗಿಕೊಂಡ ಮೇಲೂ ಮುಂದೆ ಎಷ್ಟರಮಟ್ಟಿಗೆ ಕಲೆಯಾಗಿ ನಿಲ್ಲಬಲ್ಲ ಸಾಮರ್ಥ್ಯವನ್ನು ಪಡೆದಿವೆ ಎನ್ನುವುದು ಕಾದುನೋಡ ಬೇಕಾದ ವಿಚಾರ.

ಇದರ ಜೊತೆಗೆ, ಕಳೆದ ವರ್ಷದಿಂದ ಚೀಣೀ ಧಾಳಿಯ ಪರಿಣಾಮವಾಗಿ ದೇಶಕ್ಕೆ ದೇಶವೇ ಎಚ್ಚರ ಗೊಂಡ ಪರಿಯನ್ನು, ಅನೇಕ ವೀರಗೀತೆಗಳ ನಿರ್ಮಾಣ ಪ್ರತಿಧ್ವನಿಸುತ್ತಿರುವುದು ಒಂದು ವಿಶೇಷದ ಸಂಗತಿ. ಶ್ರೀ ರಾ. ಯ. ಧಾರವಾಡಕರ ಅವರು ಸಂಪಾದಿಸಿ ಪ್ರಕಟಿಸಿರುವ "ವಿಜಯದುಂದುಭಿ" ಒಂದು ಐತಿಹಾಸಿಕ ಮಹತ್ವವನ್ನು ಒಳಗೊಂಡಿದೆ.

ಇನ್ನು ನವ್ಯ-ಅನವ್ಯ ಇತ್ಯಾದಿ ಮಾತುಗಳನ್ನು ಆದಷ್ಟು ಕಡಿಮೆ ಮಾಡುವುದು ಅಗತ್ಯವಾಗಿದೆ. ನವೋ ದಯ ಕಾವ್ಯ ಪರಂಪರೆಯಿಂದ ಮುಂದುವರಿದ ಪರಂಪರೆ ಯೊಂದನ್ನು ಗುರುತಿಸಲು "ನವ್ಯ" ಎಂಬ ಹೆಸರನ್ನು ಒಂದು ಪಾರಿಭಾಷಿಕ ಪದವನ್ನಾಗಿ ಬಳಸಲಾಯಿತೆಂದು ಭಾವಿಸುವುದು ಒಳ್ಳೆಯದು. ನವ್ಯ ಕಾವ್ಯ, ನವ್ಯವಲ್ಲದ ಕಾವ್ಯ; ನವ್ಯ ಕವಿ, ರೊಮ್ಯಾಂಟಿಕ್ ಕವಿ ಇತ್ಯಾದಿ ಹಣೆ ಚೀಟಿಗಳನ್ನು ಅಂಟಿಸಿ ಕೂಗಾಡುವುದರಿಂದ ಯಾವ ಒಳಿತೂ ಸಾಧಿತವಾಗಲಾರದು. ಯಾವ ಕಾವ್ಯವೇ ಆಗಲಿ ನಿಜವಾಗಿಯೂ ಕಾವ್ಯವಾಗಬೇಕಾದರೆ ಅದು ನವ್ಯವಾಗಿರಲೇಬೇಕು. ಈ ಅರ್ಥದಲ್ಲೇ ಪಂಪ ಮಹಾ ಕವಿ ಸಾವಿರ ವರ್ಷದ ಹಿಂದೆ ಹೇಳಿದ್ದು : 'ಇದು ನಿಚ್ಚಂ ಪೊಸತು, ಅರ್ಣವಂಬೊಲತಿಗಂಭೀರಂ ಕವಿತ್ವಂ' ಎಂದು. ಈ ನವ್ಯತೆ ಅಥವಾ ಹೊಸತನ ನೂರು ಕವಿಗಳಲ್ಲಿ ನೂರು ರೂಪದಲ್ಲಿ ಪ್ರಕಟವಾಗಬಹುದು. ಆ ಹೊಸತನ ವನ್ನು ಎಲ್ಲಿ ಕಂಡರೆ ಅಲ್ಲಿ ಗುರುತಿಸುವುದನ್ನು ಕಲಿಯ ಬೇಕಾಗಿದೆ. ಯಾವುದೋ ಒಂದು ರೀತಿಯಲ್ಲಿ ಬಂದರೆ ಮಾತ್ರ ನವ್ಯ, ಅಲ್ಲದಿದ್ದರೆ ಅಲ್ಲ, ಎನ್ನುವ ಭಾವನೆ ಯನ್ನು ನಾವು ನೀಗಿಕೊಳ್ಳಬೇಕಾಗಿದೆ. ಹಾಗೆ ನೋಡಿ ದರೆ ಕಾವ್ಯದಲ್ಲಿ ಇರುವುದು ಎರಡೇ ವರ್ಗ : ಉತ್ತಮ ಕಾವ್ಯ, ಉತ್ತಮವಲ್ಲದ ಕಾವ್ಯ. ಇದು ಯಾಕೆ ಉತ್ತಮ ಕಾವ್ಯ, ಇದು ಯಾಕೆ ಉತ್ತಮ ಕಾವ್ಯವಲ್ಲ ಎನ್ನುವುದನ್ನು ಸಹೃದಯರು ಬಲ್ಲರು, ವಿಮರ್ಶಕರು ಬಲ್ಲರು. ನಮ್ಮ ಮುಂದಿರುವ ಕಾಲ ಬಲ್ಲದು. ಇನ್ನು ಅನಗತ್ಯವಾದ ಚರ್ಚೆ ಏತಕ್ಕೆ!

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ನನಗೆ,
ದಾರಿ ನೂರಾರಿವೆ ಬೆಳಕಿನರಮನೆಗೆ—
ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ;
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂತ.
ನಾಬಲ್ಲೆ, ಇವು ಎಲ್ಲ ಏರುವೆಯ
ಒಂದೊಂದು ಹಂತ;
ನೂರಾರು ಭಾವದ ಬಾವಿ; ಎತ್ತಿಕೋ
ನಿನಗೆ ಬೇಕಾದಷ್ಟು ಸಿಹಿನೀರ.
ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ ?
ನಮಗೆ ಬೇಕಾದದ್ದು ದಾಹಪರಿಹಾರ.

---

ಶತ್ರುವಿನ ಬಳಿ ಇರಬೇಕಾಗಿ ಬಂದರೂ ಇರು, ವಿಷಸರ್ಪದ ಸನಿಹಕ್ಕೆ ಹೋಗಬೇಕಾಗಿ ಬಂದರೂ ಹೋಗು. ಆದರೆ ಮೇಲೆ ಮಿತ್ರನಂತಿದ್ದು ಒಳಗೆ ಕಪಟ ಸಾಧಿಸುವ ವ್ಯಕ್ತಿಯ ಗೆಳೆತನ ಮಾತ್ರ ಸರ್ವದಾ ಬಯಸಬೇಡ.

—ರಾಮಾಯಣ

# ‘ನುಡಿ’

ಲೇಖಕರು :
**ಶ್ರೀ ವೀರೇಶ ರಾ. ಹಿರೇಮಠ,** ಎಂ.ಎ.,ಬಿ.ಟಿ.,
ಶಿಕ್ಷಕರು :
ಸರ್ಕಾರೀ ಶಿಕ್ಷಣಶಾಲೆ, ಬೆಳಗಾಂ

ಶಿಕ್ಷಣದ ಅನೇಕಾನೇಕ ಧ್ಯೇಯಧೋರಣೆಗಳಲ್ಲಿ, ರೀತಿನೀತಿಗಳಲ್ಲಿ ಹಾಗೂ ಅಂಗಾಂಗಗಳಲ್ಲಿ ‘ನುಡಿ’ ಎಂಬ ಕಲೆಗೆ ಪ್ರಮುಖಸ್ಥಾನವಿದೆ. “ನಾಲಿಗೆ ಕುಲವನ್ನು ಹೇಳುವುದು'' “ಚೆನ್ನುಡಿಯೇ ಶಿಕ್ಷಣದ ವಿಕಾಸ” ಇತ್ಯಾದಿ ಸೂಕ್ತಗಳು ನಮ್ಮಲ್ಲಿ ಬಳಕೆಯಲ್ಲಿವೆ.

ಒಳ್ನುಡಿ ಸಂಸ್ಕೃತಿಯ ಕುರುಹು, ಧರ್ಮದ ದ್ಯೋತಕ. ನುಡಿ ಚೆನ್ನಾದರೆ, ನಡೆ ಲಿಂಗವಾಗಬೇಕು. ಶರಣರ ಸೂಳ್ನುಡಿ, ಸರ್ವಜ್ಞನ ಸಂದೇಶ, ಬಸವಣ್ಣನವರ ಅಮೃತವಾಣಿ, ಅಕ್ಕಮಹಾದೇವಿಯ ನಿಷ್ಠುರ ಹಾಗೂ ಗಂಭೀರ ವಚನಗಳು, ಪ್ರಭುದೇವರ ಜ್ಞಾನನಿಧಿ ಇವುಗಳೆಲ್ಲವೂ ಅಮರವಾಗಿ ಉಳಿಯಲು ಮತ್ತು ಬೆಳೆಯಲು ಅವರವರು ಬಳಸಿದ ಭಾಷೆ ಹಾಗೂ ಭಾವ ಮುಖ್ಯವಾದುವುಗಳು. ಭಾವಕ್ಕೆ ತಕ್ಕ ಭಾಷೆ ಮತ್ತು ಪಾತ್ರಕ್ಕೆ ತಕ್ಕ ಪೋಷಾಕು ಅತ್ಯವಶ್ಯ. ಭಾವ ಭಾಷೆಗೆ ಕೇವಲ ಪೂರಕಶಕ್ತಿಯಾಗಿರದೆ ಪ್ರೇರಕಶಕ್ತಿಯಾಗಿ ಪರಿಣಮಿಸುವುದು. ಭಾವ ಬಲಿತು ತುಂಬಿ ತುಳುಕಾಡಿದಾಗ ಭಾಷೆ ತುಂಬು ಭಾಷೆಯಾಗಿ, ಸುಂದರವಾಗಿ ಸಂಪುಷ್ಟಿಯನ್ನು ಪಡೆಯುವುದು. ಭಾವವೇ ಪ್ರಧಾನ, ಭಾಷೆ ಭಾವದ ಅನುಗಾಮಿ. ಭಾವ ಪ್ರಭು, ಭಾಷೆ ಸೇವಕ. ಭಾವ ಪತಿ, ಭಾಷೆ ಸತಿ. ಭಾವ—ಭಾಷೆಗಳ ಸಂಗಮು ಸತಿ-ಪತಿಗಳ ಸರಸ ಸಮಾಗಮದಂತೆ. ಭಾವ ಲಿಂಗ, ಭಾಷೆ ಅಂಗ. ಭಾವ ಭಾಷೆಗಳ ಮಧುರ ಮಿಲನವೇ ಲಿಂಗಾಂಗಿಗಳ ಸಂಗಮು. ಎಲುಬಿಲ್ಲದ ನಾಲಿಗೆಯ ನಿಯಂತ್ರಣ ಪ್ರಯಾಸದ ಸಿದ್ಧಿ. ನುಡಿಯಲ್ಲಿ ಮುತ್ತಿನ ರಾಶಿ ಮೂಡಿ, ಸ್ಫಟಿಕದ ಶಲಾಕೆ ಸ್ಫುರಿಸಬೇಕು. ‘ರಸಿಕ ನಾಡಿದ ನುಡಿ ಶಶಿಯುದಿಸಿದಂತಾಗಬೇಕು.’ ‘ಮಾತು ಬಲ್ಲವ ಮಾಣಿಕ್ಯ ತರುವನು.’ ‘ನುಡಿ’ ಸ್ಫೂರ್ತಿ ವೀಣೆಯ ನಿನಾದ ಹಾಗೂ ಸುಧಾಂಶುವಿನ ಪಾಲ್ಬೆಳದಿಂಗಳಂತೆ ಆಹ್ಲಾದಕರವಾಗಬೇಕು.

‘ಕೆರೆ, ಹಳ್ಳ ಭಾವಿಗಳು ಮೈದೆಗೆದರೆ ಚಿಪ್ಪುಗಳ ಕಾಣಬಹುದು, ವಾರಿಧಿ ಮೈದೆಗೆದರೆ ಮುತ್ತುರತ್ನಂಗಳ ಕಾಣಬಹುದು, ಶರಣರು ಮೈದೆಗೆದರೆ ಲಿಂಗವ ಕಾಣಬಹುದು.’

ನುಡಿ ಚೆನ್ನ ; ನಡೆ ಚೆನ್ನ.



# 'ಗುರುದೇವ'

ಲೇಖಕಿ :
ಶೈಲಜಾ, ಬೆಂಗಳೂರು

'ಸಕ್ಕರೆಯ ಪಾನಕದ ರುಚಿ ತಿಳಿದವನಿಗೆ ಜೋನಿಬೆಲ್ಲ ರುಚಿಸದು. ಅಂತೆಯೇ ಯಾರು ಪರಮಾತ್ಮನ ಭಕ್ತಿಯ ರಸಪಾನ ಮಾಡಿರುತ್ತಾರೋ ಅವರಿಗೆ ಪ್ರಾಪಂಚಿಕ ಸುಖ ರುಚಿಸದು" ಎಂದಿದ್ದಾರೆ ಶ್ರೀ ರಾಮಕೃಷ್ಣಪರಮ ಹಂಸರು. ಈ ಭಕ್ತಿಯ ರಸಪಾನ ಶ್ರೀ ಗುರುವಿನ ಕೃಪೆಯಿಂದ ಮಾತ್ರ ದೊರೆಯಬಲ್ಲುದು. ವಿಷಯ ಲೋಲುಪತೆಯಲ್ಲಿ ಮೈಮರೆತು ಮಲಗಿರುವ ಮನಸ್ಸನ್ನು ಎಚ್ಚರಿಸಿ ಸತ್ಯದರ್ಶನದ ಸವಿಯನ್ನು ಕರುಣಿಸುವವನೇ ಗುರು. ಜ್ಞಾನ, ಭಕ್ತಿ, ವೈರಾಗ್ಯಗಳತ್ತ ಕೈಹಿಡಿದು ನಡೆಸುವ ಸುಪ್ತ ಚೈತನ್ಯವೇ ಗುರುವಿನ ಅಂತಃಶಕ್ತಿ. " ಹುಟ್ಟಿದೆನು ಶ್ರೀಗುರುವಿನ ಹಸ್ತದಲಿ, ಬೆಳೆದನು ಅಸಂಖ್ಯಾತರ ಕರುಣದೊಳಗೆ " ಎಂದಿದ್ದಾಳೆ ಮಹಾ ದೇವಿ. ಈ ದೇಹ ತಂದೆ-ತಾಯಿಗಳಿಂದ ಬಳುವಳಿ ಯಾಗಿಬಂದಿದ್ದಾದರೂ ಅದರಲ್ಲಿರುವ ಆತ್ಮಚೈತನ್ಯವನ್ನು ಜಾಗೃತಗೊಳಿಸುವವನು ಗುರು. ಆತ್ಮಜಾಗೃತವಾ ದಂದೇ ಮಾನವನ ನಿಜವಾದ ಜನನ.

ಶ್ರೀಗುರುವೆ ಭವಪಾಶದೂರನೆ
ಶ್ರೀಗುರುವೆ ಆದಿ ಅಂತ್ಯದೂರನೆ
ಶ್ರೀಗುರುವೆ ಆನಂದಮಯರೂಪನೆ
ನೀ ಗತಿ ಎಂದಾತ ಅನಾಥನೇಂ ಅವನು ?
ಶ್ರೀಗುರು ಮಲ್ಲಿಕಾರ್ಜುನ ! ||೧||

ಶ್ರೀಗುರುವೆ ದಿವ್ಯಮಹಾಮುನಿಯೆ
ಶ್ರೀಗುರುವೆ ಲೋಕವೀರೇಳು ಹೆತ್ತವನೆ
ಆನಂದ ಚಿನ್ಮಯ ಮಹಾಗುರುದೇವ
ಶಿಷ್ಯಕಾರಣ ನೀವು ಪರಮ ಶಿವಮೂರ್ತಿ-
ಯಾದಿರಯ್ಯಾ
ನಿತ್ಯ ಪ್ರಸಾದದಲ್ಲಿ ಮುಕ್ತನ ಮಾಡಿದ
ನಿತ್ಯ ಜ್ಯೋತಿರ್ಮಯನೆ
ಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನಾ ||೨||

ಎಂದು ಮೈಮರೆತು ಗುರುಭಕ್ತಿಯಲ್ಲಿ ತಲ್ಲೀನನಾಗಿ ಹಾಡಿದ್ದಾನೆ ಸಿದ್ಧರಾಮೇಶ್ವರನು. ಭವಪಾಶದಿಂದ ಬಿಡಿಸುವವನೇ ಗುರು. ಮಾನವ ಹೃದಯದಲ್ಲಿ ಭಕ್ತಿಯ ಬೀಜವನ್ನು ಬಿತ್ತಿ ಬೆಳೆಸುವ ಮಹಾಶಕ್ತಿ ಶ್ರೀಗುರುವಿನ ವಾಣಿಯಲ್ಲಿದೆ. ಇಂಥ ಚಿನ್ಮಯ ಶಕ್ತಿಯ ದರ್ಶನ ಮಾತ್ರದಿಂದ ಮನಸ್ಸು ಗಂಗಾಸ್ನಾನ ಮಾಡಿದಂತೆ ಶುಚಿರ್ಭೂತವಾಗುತ್ತದೆ.

ಪ್ರಸ್ತುತ ಸಮಯದಲ್ಲಿ ದೇವರ ಹೆಸರಿನಲ್ಲಿ, ಭಕ್ತಿಯ ಸೋಗಿನಲ್ಲಿ ಜನರನ್ನು ವಂಚಿಸುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಕಷ್ಟ ಪರಿಹಾರ, ವ್ಯವಹಾರ ದಲ್ಲಿ ಜಯ ಹಾಗೂ ವ್ಯಾಪಾರದಲ್ಲಿ ಲಾಭ ಬೇಕೆನ್ನುವ ವರು ಇಂತಹ ಗುರುವನ್ನು ಆಶ್ರಯಿಸುವುದೂ ಸಹಜ. ಅವರ ತಾತ್ಕಾಲಿಕ ಮನೋಭಿಲಾಷೆಗಳು ನೆರವೇರಬಲ್ಲು ವಾದರೂ ಇದು ಭಕ್ತಿಯ ಮಾರ್ಗವಲ್ಲ. ಇದು ಕೇವಲ ಫಲಾಕಾಂಕ್ಷೆಯ ಸೋಗು. ಮುಕ್ತಿ ಫಲಗಳನ್ನು ತಿನ್ನಿಸಿ ನಿತ್ಯತೃಪ್ತರನ್ನಾಗಿ ಮಾಡುವ ಭಗವಂತನ ಮುಂದೆ ನಿಂತು ಮೆಣಸಿನಕಾಯಿ ಬೇಡುವ ಮೌಢ್ಯ ಮಾನವ ರದು. ನಿಜವಾದ ಭಕ್ತರಿಗೆ ಬಡತನವಿಲ್ಲ. ಅವರಿಗೆ ಬೇಕಾದುದನ್ನೆಲ್ಲಾ ದೇವರೇ ವ್ಯವಸ್ಥೆ ಮಾಡಿ ಬಿಡುತ್ತಾನೆ.

ಮನ ಶುದ್ಧವಾಗದವಂಗೆ ದ್ರವ್ಯದ ಬಡತನವಲ್ಲದೆ
ಚಿತ್ತ ಶುದ್ಧವಾಗಿ ಕಾಯಕದ ಮಾಡುವಲ್ಲಿ
ಸದ್ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು
ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದ ಸೇವೆ
ಯುಳ್ಳನ್ನಕ್ಕ

ಆಯ್ದಕ್ಕಿಮಾರಯ್ಯನ ಸತಿ, ಶಿವಶರಣೆ ಲಕ್ಕಮ್ಮನ ಈ ವಚನ ಭಕ್ತರ ದೃಢಮನಸ್ಸಿಗೆ ಸಾಕ್ಷೀಭೂತವಾಗಿದೆ.

ಶರಣರಲ್ಲಿ ಪವಾಡ ಶಕ್ತಿ ಸಹಜವಾಗಿ ಇದ್ದರೂ ಅವರದನ್ನು ಪ್ರದರ್ಶನ ಮಾಡರು. ದೈವಿಕಘಟನೆಗಳಿಗೆ ತಲೆಬಾಗಿ, ಪಾಪಿಗಳ ಜೊತೆಯಲ್ಲಿ ನೊಂದು, ಬಡವರ ಜೊತೆಯಲ್ಲಿ ಬೆಂದು, ಜ್ಞಾನ-ಭಕ್ತಿ-ವೈರಾಗ್ಯಗಳತ್ತ ಮನ ಹರಿಸುವ ಗುರುವೇ ನಿಜವಾದ ಮಾರ್ಗದರ್ಶನ ವೀಯಬಲ್ಲ ದಾರಿದೀಪ.

ಉಪರ್ಯುಕ್ತ ಸಲ್ಲಕ್ಷಣಗಳಿಂದ ಯುಕ್ತನಾದ ಗುರುವನ್ನು ಪಡೆಯುವುದಾದರೂ ಹೇಗೆ ?

"ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿ ಇಪ್ಪಂತೆ
ಅಡಗಿಪ್ಪರಯ್ಯಾ ಶಿವಶರಣರು"

—ಇದು ಪ್ರಭುದೇವರ ನಿರ್ಣಯ.

ಆದ್ದರಿಂದ ನಾವು ನಮ್ಮ ಸುಕೃತದಿಂದ ಮಾತ್ರ ಇಂತಹ ಸದ್ಗುರುವನ್ನು ಗುರುತಿಸಬಲ್ಲೆವು. ಅಗೋಚರ ನಾಗಿರುವ ಈಶ್ವರನನ್ನು ಗೋಚರನನ್ನಾಗಿ ಮಾಡಿ ಕೊಡುವ ಸಿತ್ಯನಿರಂತರ ಶ್ರೀಗುರುವಿನ ಚರಣಾರವಿಂದ ಗಳಲ್ಲಿ ಈ ಭಕ್ತಿಯ ಕುಸುಮ ಅರ್ಪಿತ.



- ಮಂಜು ಸುರಿದರೆ ನಂಜನಗೂಡು ಮುಳುಗೀತೇ ?
- ತಲೆ ಸುರಕ್ಷಿತವಿದ್ದರೆ ಮುಂಡಾಸು ಸಹಸ್ರ ಕಟ್ಟಬಹುದು.
- ನೆಂಟರು ದೂರವಿರಬೇಕು ; ಬಾವಿ ಹತ್ತಿರವಿರಬೇಕು.
- ನೆಲ ಬಲವಂತನಿಗೆ, ಕುಲ ನೇಮವಂತನಿಗೆ.
- ಕುಟ್ಟಲಾರದ ಕುಟಿಲೆ ಊದಿ ಊದಿ ನೋಡಿದಳಂತೆ.
- ಮಳೆಯ ನೀರನು ಬಿಟ್ಟು ಮಂಜಿನ ಹನಿಗೆ ಕೈಯೊಡ್ಡಿದ ಹಾಗೆ.

# ಅಲ್ಲಮ ಪ್ರಭು

ಲೇಖಕರು : ಸಿ. ವೀರಣ್ಣ, ಹಣಬೆ, ದೊಡ್ಡಬಳ್ಳಾಪುರ ತಾ||

ಭಾರತದಲ್ಲಿ ಬುದ್ಧನ ಅನಂತರ ಮಾನವ ಕಲ್ಯಾಣ ಕ್ಕಾಗಿ, ಸಮಾಜದ ಸರ್ವೋನ್ನತಿಗಾಗಿ ಸಾಮಾಜಿಕ ಕ್ರಾಂತಿಯೊಂದು ರೂಪಗೊಂಡುದು ಹನ್ನೆರಡನೆಯ ಶತಮಾನದಲ್ಲಿ; ಅದು ನಡೆದುದು ಕರ್ಣಾಟಕದಲ್ಲಿ! ಈ ಸಾಮಾಜಿಕ ಕ್ರಾಂತಿ ಕನ್ನಡ ಸಾಹಿತ್ಯದಲ್ಲಿ ಅಪೂರ್ವ ವಾದಂತಹ ವಚನ ಸಾಹಿತ್ಯವನ್ನು ರೂಪಿಸಿತು; ಕೊಡುಗೆ ಯಾಗಿ ನೀಡಿತು. ಸಾಮಾಜಿಕ ಭೇದಭಾವವನ್ನು ತೊಡೆಯಲು ಪ್ರಯತ್ನಿಸಿ ಕಾಯಕವೇ ಕೈಲಾಸವನ್ನು ಜನತೆಯಲ್ಲಿ ರೂಪಿಸಲು ಯತ್ನಿಸಿ ಸಾಕಷ್ಟು ಯಶಸ್ವಿ ಯಾಯಿತು ಮಾನವ ಕಲ್ಯಾಣಕ್ಕೆ ಶ್ರಮಿಸಿದ ಈ ವಿಚಾರ ಪೂರ್ಣ ಕ್ರಾಂತಿಗೆ ಆಧಾರಸ್ತಂಭವಾಗಿ ನಿಂತು, ಸೂತ್ರಧಾರನಾಗಿ ನಿಂತು ಬಸವಣ್ಣನವರಿಗೆ ಚೈತನ್ಯ ದಾಯಿಯಾದ ವ್ಯಕ್ತಿ ಪ್ರಭುದೇವ; ಅವನೇ ಅಲ್ಲಮ.

ಅಲ್ಲಮನ ಪೂರ್ವಾಶ್ರಮದ ಬಗ್ಗೆ ಅನೇಕ ದಂತ ಕಥೆಗಳೂ ಪವಾಡದಿಂದ ಕೂಡಿದ ಅತಿಮಾನವ ವ್ಯಕ್ತಿತ್ವ ವನ್ನೂ ಅನೇಕರು ಅನೇಕ ರೀತಿಯಾಗಿ ಹೇಳಿದ್ದಾರೆ. ಹರಿಹರ ಅಲ್ಲಮನಿಗೆ ಭಾರ್ಯಾ ಮರಣದಿಂದ ವೈರಾಗ್ಯ ಬಂತೆಂದು ಹೇಳಿದರೆ, ಚಾಮರಸ ಅಲ್ಲಮ ಧರ್ಮೋದ್ಧಾರ ಕ್ಕಾಗಿ ಅವತರಿಸಿದ ಶಿವನೆಂದು ಹೇಳುತ್ತಾನೆ. ಈ ಬಗ್ಗೆ ನಾದ ವಿವಾದಗಳೇನಿದ್ದರೂ ಐತಿಹಾಸಿಕದೃಷ್ಟಿಯಿಂದಲೂ ಅಲ್ಲಮನ ವ್ಯಕ್ತಿ ಜೀವನದ ವಿಚಾರ ಸಂಗ್ರಹಣೆಗೂ ಅಗತ್ಯವಾಗಬಹುದೇ ವಿನಾ, ಅವನ ತಾತ್ವಿಕ ಜೀವನದ ಬಗ್ಗೆ ಅಗತ್ಯವಿಲ್ಲ. ಇಲ್ಲಿಯವರೆಗೆ ಮಹಾಪುರುಷರನ್ನು ಅವತಾರ ಪುರುಷರೆಂದೂ, ಹುಟ್ಟುವ ಮೊದಲೇ ಮಹಿ ಮಾನ್ವಿತರಾಗಿ ಬಂದವರೆಂದೂ ಚಿತ್ರಿಸಿದ್ದರಿಂದ ಜನತೆ ಯಲ್ಲಿ ಒಂದು ಬಗೆಯಾದ ಮೌಢ್ಯ ಸಹಿತವಾದ ಪೂಜ್ಯ ಭಾವನೆ ಬಂತೇ ವಿನಾ ತಾವೂ ಸಾಧಕರಾಗಿ ಸಿದ ರಾಗೋಣ ಎನ್ನುವ ಚೈತನ್ಯ ಬರಲಾರದಂತಾಯಿತು. ಮಹಾಪುರುಷರೂ ಮಾನವ ಸಂಜಾತರಾಗಿ, ಸಹಜ ಗುಣ ಧರ್ಮಗಳನ್ನು ಹೊಂದಿ ಅವುಗಳನ್ನು ಕಿತ್ತೊಗೆದು ಮೇಲೇರಲು ಅವರು ನಡೆಸಿದ ಸಾಧನೆ, ಸಂಯಮ, ಎದುರಿಸಿದ ಅಡ್ಡಿ ಆತಂಕಗಳನ್ನು ಸ್ಪಷ್ಟವಾಗಿ ಚಿತ್ರಿಸಿ, ಮಾನವ–ದೇವಮಾನವನಾದ ರೀತಿಯನು ಹೇಳುವುದು ಜನತೆ ತಮ್ಮ ಅರಿವನ್ನು ಮಾಡಿಕೊಳ್ಳಲು, ತಾವೂ ಸಾಧಕರಾಗಲು ಹೆಚ್ಚು ಸಹಕಾರಿಯಾಗುತ್ತದೆ. ಈ ದೃಷ್ಟಿಯಿಂದ ಅಲ್ಲಮನ ಬಗ್ಗೆ ರಚಿತವಾದ ಡಾ|| ಹೆಚ್. ತಿಪ್ಪೇರುದ್ರಸ್ವಾಮಿಯವರ "ಪರಿಪೂರ್ಣದೆಡೆಗೆ" ಯಶಸಿ ಯಾಗಿದೆ.

ಅಲ್ಲಮ ಮದುವೆಯಾಗಿರಲಿ, ಬಿಟ್ಟಿರಲಿ, ಮಾಯಾ ಕೋಳಾಹಳನಾಗಿರಲಿ ಇಲ್ಲದಿರಲಿ ನಾವು ಅವನನ್ನು ನೋಡಬೇಕಾದುದು ಅವನ ಜ್ವಲಂತ ಜ್ಞಾನದರ್ಶನ ವನ್ನು, ಮಾನವ ಕಲ್ಯಾಣದ ಬಗ್ಗೆ ಅವನಿಗಿದ್ದ ವಿಶಾಲ ಜ್ಞಾನವಾರಿಧಿಯನ್ನಷ್ಟೆ. ಸಂಪ್ರದಾಯಗಳ ಸಂಕೋಲೆ ಯನ್ನು ಕಿತ್ತು, ಜ್ಞಾನವೇ ಮಾನವ ಕಲ್ಯಾಣಕ್ಕೆ ದಾರಿ ದೀಪ, ಅದಕ್ಕೆ ಜಾತಿ, ಮತ, ವರ್ಣಗಳ ಸೋಂಕು ಇಲ್ಲ ಎನ್ನುವುದನ್ನು ನಿರ್ಭಯನಾಗಿ, ಅನುಭವ ಮಂಟಪದ ಶೂನ್ಯ ಸಿಂಹಾಸನಾಧೀಶನಾಗಿ, ಸರ್ವಕಾಲ ದೇಶಕ್ಕೂ ಮಾರ್ಗದರ್ಶಕನಾಗಿ ಬದುಕಿದ್ದಾನೆ ಪ್ರಭುದೇವ.

ಅಲ್ಲಮನ ಸಾಧನೆಗಳ ಬಗ್ಗೆಯಾಗಲೀ, ಅವನ ಜೀವನದ ವಿಚಾರವಾಗಿಯಾಗಲೀ ಇಲ್ಲಿ ಪ್ರಸ್ತಾಪಿಸ

ಲಿಚ್ಚಿಸವೆ ದಾರ್ಶನಿಕ, ಜ್ಞಾನಿ, ವಿಚಾರವಾದಿ ಅಲ್ಲಮನನ್ನು ನೋಡಲು ಪ್ರಯತ್ನಿಸಲಾಗಿದೆ.

ಅಲ್ಲಮ ಕಂಡು ನೋಡಿದ ಎಲ್ಲಾ ವ್ಯಕ್ತಿಗಳ ಮೇಲೂ ತನ್ನ ಪ್ರಭಾವವನ್ನು ಬೀರಿದ್ದಾನೆ. ಕರ್ಮ ಯೋಗಿ ಸೊನ್ನಲಿಗೆಯ ಸಿದ್ಧರಾಮ, ಅನೇಕ ಗುಡಿ ಗೋಪುರಗಳನ್ನು ಕೆರೆಕುಂಟೆಗಳನ್ನೂ ನಿರ್ಮಾಣ ಮಾಡಿಸುತ್ತ ಜನಸೇವೆಗೈಯುತ್ತಿರುತ್ತಾನೆ. ಅಲ್ಲಿಗೆ ಬಂದು ಸಿದ್ಧರಾಮನ ಕೆಲಸಕಾರ್ಯಗಳನ್ನೆಲ್ಲಾ ಕಂಡು ಪ್ರಭು "ಒಡ್ಡರೊಡೆಯ ಸಿದ್ಧರಾಮ" ಎನ್ನುತ್ತಾನೆ. ಮಾನವನ ಪೂರ್ಣತೆಗೆ ಬರಿಯ ಕರ್ಮವೇ ಗುರಿಯಲ್ಲ ವೆನ್ನುತ್ತಾ "ಸಕಲ ಕಲ್ಲನು ಕಡಿದು ಶಿಖರದೇಗುಲವೆಂದು ಮಾಡಿ ಮಕರಿಸುವರಿವರೊಡ್ಡರಲ್ಲದೆ ಸಿದ್ಧರಲ್ಲ ಕಾಣಾ ಗುಹೇಶ್ವರಾ" ಎನ್ನುತ್ತಾನೆ. ದೇವನಿಗೆ ಗೃಹ ನಿರ್ಮಾಣ ಮಾಡುವುದಕ್ಕಿಂತ ಮಾನವನು ಮಾನವನನ್ನು ತಿಳಿದು ಬದುಕುವ ರೀತಿ ಶ್ರೇಷ್ಠವೆನ್ನುತ್ತಾನೆ.

ಅಲ್ಲಮನನ್ನೇ ಪರೀಕ್ಷೆಗೆ ಗುರಿಪಡಿಸಿದ ಸತ್ತಿ ಮುಕ್ತಾಯಕ್ಕ. ತನ್ನ ಅಣ್ಣನ ಅಗಲುವಿಕೆಯಿಂದ ಪರಿತಪಿಸುತ್ತಿದ್ದ ಆಕೆಗೆ ಪ್ರಭು ಸಮಾಧಾನ ಹೇಳುತ್ತಾನೆ. ಆಕೆ ನೀನು ಬರಿಯ ಮಾತುಗಾರ-ಸಿದ್ಧನಲ್ಲ ಎಂದು ಹೀಗಳೆದಾಗ "ತನ್ನ ತಾನರಿದೊಡೆ ನುಡಿಯೆಲ್ಲ ಪರತತ್ವ ನೋಡಾ ॥ ತನ್ನತಾನುಮರೆದೊಡೆ ನುಡಿಯೆಲ್ಲ ಮಾಯೆ ನೋಡಾ" ಎಂದೂ "ಮಾತೆಂಬುದು ಜ್ಯೋತಿರ್ಲಿಂಗ" ಎಂದೂ ಹೇಳುತ್ತಾನೆ. ಮಾತು ಕೇವಲ ಮಾತಲ್ಲ, ಅದು ಸಾಕ್ಷಾತ್ ಶಕ್ತಿ ಸ್ವರೂಪಿ ಎಂದು ಮಾತಿನ ಮಹತ್ವವನ್ನು ಹೇಳಿ ಆಕೆಯನ್ನು ಸಮಾಧಾನ ಗೊಳಿಸುತ್ತಾನೆ

ಪ್ರಭು ತನ್ನ ಮನದ ಹೊಯ್ದಾಟಗಳನ್ನೂ, ತನ್ನ ಸಾಧನೆಗೆ ಅಡ್ಡಿ ಬಂದ ಅನೇಕ ಎಡರುತೊಡರುಗಳನ್ನೂ ತನ್ನ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. "ಗುಹೇಶ್ವರನ ಪಿರಿದಲ್ಲಿ ಜಿಂದವರ ಮರಳಿ ಸುಡಲುಂಟೆ ಮರುಳು ಕಾಣಾ" ಎನ್ನುವಾಗ ಮನ್ಮಥನ ಬಗ್ಗೆ ಅವನ ಸಾಧನಾ ಪೂರ್ಣ ತಿರಸ್ಕಾರದ ಹೀಯಾಳಿಕೆ. ಅದರ ಹಿಂದೆ ಅಡಗಿರುವ ಅವನ ಮನದ ತೊಯ್ದಾಟವನ್ನು ಕಾಣುತ್ತೇವೆ. "ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯಾ....ಅವಾಗಲು ತೋಂಟವಲಿ ಜಾಗರವಿದ್ದು ಸಸಿಯ ಸಲಹಿದೆನುಕಾಣಾ" ಇಲ್ಲಿ ಅವನ ಸಾಧನೆ ಹೇಗೆ ಸಾಗಿತು ಎಂದೂ, ಆ ಸಾಧನೆಯ ಸಸಿಯನ್ನು ಕಾಯಲು ಸದಾ ಎಚ್ಚರವಿದ್ದೆನೆಂದೂ ಹೇಳುತ್ತಾನೆ. ಸಾಧಕ ಸದಾ ಜಾಗೃತವಾಗಿರಬೇಕೆಂಬ ಸಂದೇಶ ಉತ್ತಮ ಮಾರ್ಗ ಸೂಚಿ.

ಸಾಧಕ ಸಿದ್ಧನಾಗಿ ಕಲ್ಯಾಣಕ್ಕೆ ಅಲ್ಲಮ ಧಾವಿಸಿದಾಗ ಬಸವಣ್ಣ ಅವನನ್ನು ಗುರ್ತಿಸುತ್ತಾನೆ. ತನ್ನ ಕಾರ್ಯಗಳಿಗೆ, ತಾನು ಮಾಡುತ್ತಿದ್ದ ಸಾಮಾಜಿಕ ಐಕ್ಯತೆಗೆ ಅಲ್ಲಮನನ್ನು ನಾಯಕನನ್ನಾಗಿ ಸ್ವೀಕರಿಸುತ್ತಾನೆ. ಅಲ್ಲಮನ ಬೆಂಕಿಯಂತಹ ವ್ಯಕ್ತಿತ್ವವನ್ನು ಬಸವಣ್ಣ ಗುರ್ತಿಸಿದುದರಿಂದ ಅವನ ಅನುಯಾಯಿಗಳೂ ಗುರ್ತಿಸಿದರೇ ವಿನಾ ಕಾಲಾತೀತನಾದ ಅಲ್ಲಮನನ್ನು ಕಾಣುವುದು ಅವರಿಗೆ ಕಷ್ಟತರವಾಗುತ್ತಿತ್ತು ಎನ್ನಿಸುತ್ತದೆ. ಅಂತಹ ರಾಗರಹಿತ ವ್ಯಕ್ತಿತ್ವ ಅಲ್ಲಮನದು.

ಕಲ್ಯಾಣಕ್ಕೆ ಬಂದು ಶೂನ್ಯಸಿಂಹಾಸನಾಧೀಶನಾದ ಮೇಲೆ ಅಲ್ಲಮನ 'ದರ್ಶನ' ಪ್ರಾರಂಭವಾಗುತ್ತದೆ. ಮತಾತೀತವಾಗಿದ್ದ ಅನುಭವ ಮಂಟಪದಲ್ಲಿ, ಸಭಾಪತಿಯಾಗಿ, ಮಾರ್ಗದರ್ಶನಮಾಡುತ್ತ, ಎಡವಿದವರನ್ನು ಎಬ್ಬಿಸುತ್ತ, ಹಮ್ಮಿನಿಂದ ಕೂಡಿದವರನ್ನು ವಿಚಾರದೆಡೆಗೆ ಕರೆತರುತ್ತ ನಡೆದ ಕೀರ್ತಿ ಅಲ್ಲಮನಿಗೇ ಸಲ್ಲುತ್ತದೆ. ಅನುಭವ ಮಂಟಪದಲ್ಲಿ ಪ್ರಭುವಿಗೂ ಮಹದೇವಿಯಕ್ಕನಿಗೂ ನಡೆದ ತಾತ್ವಿಕ ವಿವೇಚನೆ ಅತ್ಯಂತ ಮಹತ್ವಪೂರ್ಣವಾದದ್ದು. ದಿಗಂಬರಳಾಗಿ ಬಂದ ಆಕೆಯನ್ನು ಅನೇಕ ವಿಧದಲ್ಲಿ ಪರೀಕ್ಷೆಗೆ ಗುರಿಮಾಡುತ್ತಾನೆ. ತಾನು ಶಿವನ ಸತಿ ಎಂದೂ ವಿಕಾರ ರಹಿತಳೆಂದೂ ಆಕೆ ಉತ್ತರಿಸಿದರೆ ಪ್ರಭು "ನಾ ಸತ್ತೆನೆಂದು ಹೆಣ ಕೂಗಿದುದುಂಟೇ ?" ಶಿವನೇ ಪತಿಯಾಗಿ ನೀನು ಅವನಲ್ಲಿ ಬೆರೆತಿದ್ದರೆ ಮಾತು ಮೌನವಾಗುತ್ತಿತ್ತು ಎನ್ನುತ್ತಾನೆ. ವಿಕಾರ ರಹಿತಳಾಗಿದ್ದರೆ "ಕೂದಲ ಮರೆಮಾಡಲೇತಕ್ಕೆ ?" ಎನ್ನುವ ಕತ್ತಿಯನ್ನೇ ಅವಳತ್ತ ಎಸೆಯುತ್ತಾನೆ. ಆದರೆ ಅಕ್ಕ ಫಲಮಾಗದೆ ಸಿಪ್ಪೆ ಒಪ್ಪಗೆಡದೆಂದೂ" "ಕಾಮನ ಮುದ್ರೆಯ ಕಂಡು ನಿಮಗೆನೋವಾದೀತೆಂದು ಮುಚ್ಚಿವೆ" ಎಂದುತ್ತರಿಸಿ ಯಶಸ್ವಿಯಾಗುತ್ತಾಳೆ

ಅನಾದಿ ಅನಂತವಾಗಿರುವ ಹೆಣ್ಣು ಗಂಡಿನ ಸಮಸ್ಯೆಯನ್ನು ಹೀಗೆ ಹೊಸ ಮಾರ್ಗದಲ್ಲಿ ನೋಡುವ ದೃಷ್ಟಿ ಅನುಭವ ಮಂಟಪದಲ್ಲಿ ರೂಪಗೊಂಡಿತು. ಮಹಾದೇವಿಯನ್ನು ಒರೆಗೆ ಹಚ್ಚಿದ್ದಾದನಂತರ ಹೃದಯ

ತುಂಬಿ ಆಕೆಯನ್ನು ಸ್ತುತಿಸುತ್ತಾನೆ. "ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು....ನಮ್ಮ ಗುಹೇಶ್ವರಲಿಂಗದಲ್ಲಿ ಸ್ವಯವಾದ ಮಹದೇವಿಯಕ್ಕಗಳನಿಲುವಿಂಗೆ ಶರಣೆನುತಿರ್ದೆನು" ಎಂದಾಗ ಗುಣಗ್ರಾಹಿ ಅಲ್ಲಮ ನಮಗೆ ಕಾಣಿಸುತ್ತಾನೆ.

ಅಲ್ಲಮ ಒಂದು ಪದ್ಧತಿಯನ್ನಾಗಲಿ, ಒಂದು ಮತವನ್ನಾಗಲೀ ಅನುಸರಿಸಿ ನಡೆದವನಲ್ಲ. ಅವನ ಸಮಾಜದವರೇ ಅನುಸರಿಸುತ್ತಿದ್ದ ಅನೇಕ ಆಚಾರ ವ್ಯವಹಾರಗಳನ್ನು ಖಂಡಿಸಿದ್ದಾನೆ. ಗುರುವಿನ ಅಗತ್ಯ ಎಲ್ಲರಿಗೂ ಇದೆ ಎಂದು ಶರಣರೊಪ್ಪಿದ್ದರೂ ಅಲ್ಲಮ "ತನ್ನರಿದವಂಗೆ ತನ್ನರಿವೆ ಗುರು" ಎಂದು ಹೇಳಿ ಶರಣು ಹೋಗುವ ಅಲ್ಪತೆಯನ್ನು ಕಿತ್ತು ಹಾಕಿದ್ದಾನೆ. ವಯೋಧರ್ಮದ ಆಧಾರದಮೇಲೆ ಹಿರಿದುಕಿರಿದುಗಳ ವಿಂಗಡಣೆಗೆ ಅವನ ಅನುಮತಿ ಇಲ್ಲ. ''ಕಿರಿಯರಾದಡೇನು ? ಹಿರಿಯರಾದಡೇನು ? ಅರಿವಿಂಗೆ ಹಿರಿದು ಕಿರಿದುಂಟೇ ?" ಚಿಕ್ಕಸೊಡರು ಕೊಡುವುದೂ ಬೆಳಕೇ, ದೊಡ್ಡದು ಕೊಡುವುದೂ ಬೆಳಕೇ! ಅಂತೆಯೇ ಜ್ಞಾನಕ್ಕೆ ತಾರತಮ್ಯವಿಲ್ಲವೆಂದೂ, ''ಹಿರಿ ಕಿರಿದೆಂಬ ಶಬ್ದವಡಗಿದರೆ ಶರಣ" ನಾಗಲು ಸಾಧ್ಯವೆಂದೂ ಅವನ ಅಭಿಪ್ರಾಯ.

ಜಗತ್ತು ನಶ್ವರ, ಮಾಯೆ ಎಂದು ಹೇಳಿದವರನ್ನೂ ಹೆಣ್ಣು, ಹೊನ್ನು, ಮಣ್ಣುಗಳು ಮಾಯೆ ಎಂದವರನ್ನೂ ಒಪ್ಪದೆ ''ಮನದ ಮುಂದಣಾಶೆಯೇ ಮಾಯೆಕಣಾ'' ಎನ್ನುತ್ತಾನೆ. ಮಾಯೆ ಹೆಣ್ಣು ಹೊನ್ನು ಮಣ್ಣುಗಳಲ್ಲ ; ಮನದ ಭಾವನೆಯಿಂದ ಮೂಡಿದ ಆಶೆಯೇ ಮಾಯೆಯಾಗುತ್ತದೆ. ಜಗತ್ತನ್ನು ಜಯಿಸಲಾರದೆ ಪರವನ್ನು ಕುರಿತು ಹೇಳುವುದನ್ನು ವಿರೋಧಿಸಿ ''ಕೊಟ್ಟ ಕುದುರೆಯ ಬಿಟ್ಟು ಮತ್ತೊಂದು ಕುದುರೆಯ ಬಯಸುವವರು ವೀರರೂ ಅಲ್ಲ ಧೀರರೂ ಅಲ್ಲ'' ಎಂದು ಕರ್ತವ್ಯವನ್ನು ಕಡೆಗಣಿಸಿ,ಅದೃಷ್ಟಕ್ಕೆ ಕೈಚಾಚಿದವರನ್ನು ಹಳಿಯುತ್ತಾನೆ.

ಹೆಣ್ಣು ಸಾಧನೆಗೆ ಅಡ್ಡಿ ಎಂದವರಿಗೆ ''ದಂಪತಿ ಭಾವ ಏಕಭಾವವಾಗಿ ನಿಂತಲ್ಲಿ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯ್ತು" ಎನ್ನುತ್ತಾನೆ. ಸತಿಪತಿ ಭಾವನೆಗಳ ಮಿಳನ, ಅವರ ಜೀವನದ ಅಪೂರ್ವ ಮೈತ್ರಿ ಶಿವಪ್ರಿಯವೆಂದೇ ಅವನ ನಿರ್ಣಯ. ಸಂಸಾರಕ್ಕಳುಕಿ ಓಡಿದವರನ್ನು ''ಕಳ್ಳಗಂಜಿ ಕಾಡಹೊಕ್ಕರೆ ಹುಲಿ ತಿಂಬುದ ಮಾಬುದೇ'' ಎಂದು ಅಣಕಿಸುತ್ತಾನೆ.

ಪ್ರಭು ಸಾಮಾಜಿಕ ಕ್ಷೇತ್ರದ ಕಡೆಗೆ ತನ್ನ ಗಮನವನ್ನು ಹರಿಸದಿದ್ದುದರಿಂದ, ಕಾಲಧರ್ಮಕ್ಕೆ, ಸನ್ನಿವೇಶಕ್ಕೆ ಅಡಿಯಾಳಾಗಿ ನಿಂತು ದೌರ್ಬಲ್ಯವನ್ನು ತೋರಿಸುವ ಸಕಾಲಿಕ ವ್ಯಕ್ತಿತ್ವ ಮೂಡದೆ, ಕಾಲಾತೀತವಾದ ಸಮಾಜ, ಸನ್ನಿವೇಶಗಳನ್ನು ನಿರ್ಭಯವಾಗಿ ಪ್ರಭು ಟೀಕಿಸಿದ್ದಾನೆ. ಅವುಗಳಲ್ಲಿ ಜ್ಞಾನದ ಹೊಳಪು, ವಿಚಾರದ ಹರಿತ ಹುದಿದೆ. ಮೌಢ್ಯದಿಂದ ಮಣಿಯ ನೆಣಿಸಿ ಕುಂತವರಿಗೆ ''ಮಣಿಯ ನೆಣಿಸಿ ದಿನವ ಕಳೆಯಲು ಬೇಡ....ಕ್ಷಣವಾದರೂ ನಿಜದ ನೆನಹೇ ಸಾಕು" ಎನ್ನುತ್ತಾನೆ. ತೀರ್ಥಯಾತ್ರೆ, ಸ್ನಾನಾದಿಗಳಿಂದ ಮುಕ್ತಿ ಎಂದವರಿಗೆ ''ಸುತ್ತಿ ಸುತ್ತಿ ಬಂದಡಿಲ್ಲ ಲಕ್ಷಗಂಗೆ ಮಿಂಡಡಿಲ್ಲ....ಬಚ್ಚ ಬರಿಯ ಬೆಳಗು ಗುಹೇಶ್ವರಾ" ಎಂದು ಹೇಳಿ ''ನೋಡುವುದ ನೋಡಲರಿಯದೆ ಕೆಟ್ಟಿತೇ ಜಗವೆಲ್ಲಾ" ಎಂದು ಪರಿತಾಪಪಡುತ್ತಾನೆ. "ಒಳಗೆ ತೊಳೆಯಲರಿಯದೆ ಹೊರಗೆ ತೊಳೆವುತ್ತಿರ್ದರಯ್ಯಾ....ನಿಚ್ಚಕ್ಕೆ ಅರ್ಚನೆಯಮಾಡಿ ಭೋಗವ ಮಾಡಿದವರ ಕಂಡು ನಾನು ಬೆರಗಾದೆನಯ್ಯಾ" ಅಂತರಂಗ ಶುದ್ಧತೆ ಇಲ್ಲದ ವೇಷಗಾರರೂ, ಆಡಂಬರದ ಪೂಜೆಗಾರರೂ ಅಲ್ಲಮನಿಗೆ ಬೇಕಿಲ್ಲ. ಭವಿಯ ಕಳೆದೆವೆಂಬ ಮರುಳು ಜಗಂಗಳು ನೀವು ಕೇಳಿರೇ....ನಾನು ಭವಿಯ ಪೂಜಿಸಿ ಭವನಾಸ್ತಿಯಾದೆನು ಗುಹೇಶ್ವರಾ" ಜನ ಮಾನವ ಸೇವೆಯನ್ನು ಮರೆತು, ತಾವು ದೇವರಿಗೆ ಮಾತ್ರ ಸೇವೆ ಮಾಡಿ ಮುಕ್ತರಾದೆನೆಂದರೆ ತಾನು ಜನಸೇವೆ ಮಾಡಿ ಭವಕಳೆದೆನೆನ್ನುವ ನಿಷ್ಕಾಮ ಕ್ರಿಯೆಯನ್ನು ಹೇಳುತ್ತಾನೆ.

ವ್ರತ ನೇಮಗಳನ್ನು ಹಿಡಿದು ಕುಳಿತವರಿಗೆ "ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ, ಪುಷ್ಪ ನೇಮವ ಹಿಡಿದಾತ ದುಂಬಿಯಾಗಿ ಹುಟ್ಟುವ" ಎಂದು ಅಣಕಿಸುತ್ತಾನೆ. ಸತ್ತ ಮೇಲೆ ಸ್ವರ್ಗಕ್ಕಾಗಿ ಹಂಬಲಿಸಿ ಪೂಜಿಸುವವರನ್ನು "ಬದುಕಿದಾಗಲೆ ಮುಕ್ತಿ, ಸತ್ತಬಳಿಕ ಪೂಜಿಸ ಹೋದರೆ ಆ ದೇವರೇನ ಕೊಡುವನೋ ?'' ಮರ್ತ್ಯವನ್ನು ಮಾಯೆ ಎಂದು ನಿರ್ವೀರ್ಯ ಗೊಳಿಸಿದವರನ್ನು? ಪೂಜಿಸಿಕೊಳ್ಳಲು ಆ ದೇವರು ಏನನ್ನು ಮಾರಬಲ್ಲ, ಎಂದು ಪ್ರಶ್ನೆ ಹಾಕುತ್ತಾನೆ. ಶರಣರೊಂದಿಗೆ ಅನೇಕ ವೇಷಧಾರಿಗಳನ್ನೂಅಲ್ಲಮ ಗುರ್ತಿಸಿರಬೇಕು. ಅವರಿಗೂ ಅವನ ಗಧಾ ಪ್ರಹಾರವಾಗಿದೆ. ''ಭಸ್ಮವ ಹೂಸಿ ಬತ್ತಲೆ ಇದ್ದಡೇನು ಬ್ರಹ್ಮಚಾರಿಯೇ ? ಅಶನವನುಂಡು ವ್ಯಸನವ ಮರೆದಡೇನು ಬ್ರಹ್ಮಚಾರಿಯೇ ? ಅಂಗಜೀವಿ

ಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆ ನುಡಿವರಯ್ಯಾ'' ಅವನಿಗೆ ಬೇಕಾದುದು ಇದಲ್ಲ; ಈ ವೇಷ ಶ್ರಮಗಳೆಲ್ಲ ಅನ್ನಕ್ಕಾದುದು ''ಭಾವ ಬತ್ತಲೆ ಇದ್ದು ಮನವು ಗಂಭೀರ ವಾದರೆ ಅದು ಸಹಜ ನಿರ್ವಾಣಕಾಣಾ'' ಈ ನಿರ್ಲಿಪ್ತ ಸಹಜ ಭಾವನೆಯ ಬೆಳವಣಿಗೆ ಬೇಕು ಎನ್ನುತ್ತಾನೆ. ಸಮಾಜದಲ್ಲಿ ವೇದಶಾಸ್ತ್ರಗಳ, ಅರ್ಥವಾಗದ ಮಂತ್ರಗಳ ಪ್ರಭಾವ, ಅವುಗಳನ್ನು ಜನತೆ ಅರ್ಥಮಾಡಿಕೊಳ್ಳಲಾರದೆ ತೊಳಲಿದುದನ್ನು ಕಂಡು "ವೇದ ವೇಧಿಸಲರಿಯದೆ ಕೆಟ್ಟವು" ಎನ್ನುತ್ತಾನೆ. ಒಂದು ಕಾಲದ ಉತ್ತಮ ಪದ್ಧತಿಯೊಂದು ಮತ್ತೊಂದು ಕಾಲದ ಸಮಯ ಸಾಧಕರು ಮತ್ತು ಶೋಷಕರ ಕೈಗೆ ಸಿಕ್ಕಿದಾಗ ದುರುಪ ಯೋಗಕ್ಕೆ ಒಳ್ಳೆಯ ಅಸ್ತ್ರವಾಗುತ್ತದೆ. ವೇದೋಪ ನಿಷತ್ತುಗಳನ್ನು ಜನತೆಯನ್ನು ಸೂರೆ ಮಾಡಲು ಮಾತ್ರ ಉಪಯೋಗಿಸಿ, ವಿಚಾರದತ್ತ ಬಿಡದೆ ಕಟ್ಟಿ ಹಾಕಿದ ಕಾಲವದು. ಆದ್ದರಿಂದ ಜನತೆಗೆ ಅವರ ಭಾಷಾ ಶೈಲಿ ಯಲ್ಲಿಯೇ ವೇದೋಪನಿಷತ್ತುಗಳ ಹೆಸರಿನಲ್ಲಿ ವೇಷ ಹಾಕಿದ್ದ ಆಚಾರಗಳನ್ನು ಅವರು ಖಂಡಿಸಲೇ ಬೇಕಾ ಯಿತು. ಆದ್ದರಿಂದಲೇ ಅಲ್ಲಮ ''ವೇದವೆಂಬುದು ಓದಿನ ಮಾತು. ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣವೆಂಬುದು ಪುಂಡರಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿಯೆಂಬುದು ತೋರಿ ಉಂಬ ಲಾಭ ಗುಹೇಶ್ವರನೆಂಬುದು ಮಿಂಚಿದ ಘನವು" ವೇದ,ಪುರಾಣ, ಶಾಸ್ತ್ರ, ತರ್ಕಗಳೆಲ್ಲ ಕೇವಲ ಪುಸ್ತಕದ ಬದನೆಕಾಯಿ ಯಾಗಿ, ಡಾಂಭಿಕರ ಅಸ್ತ್ರಗಳಾದ್ದರಿಂದಲೂ, ಅವು ಕೇವಲ ಒಣ ತರ್ಕಕ್ಕೆ ಮೀಸಲಾದ್ದರಿಂದಲೂ, ಅವು ಗಳಿಗೂ ಮೀರಿದುದು ಗುಹೇಶ್ವರನೆಂಬುದು.ಎನ್ನುತ್ತಾನೆ. ಬಸವಣ್ಣನವರದು ಭಕ್ತಿ ಮಾರ್ಗವಾದರೂ ಅದನ್ನೂ ಟೀಕಿಸದೆ ಬಿಟ್ಟಿಲ್ಲ.

ಲಿಂಗಧಾರಣೆಯನ್ನೂ ದೇವಾಲಯಗಳ ನಿರ್ಮಾಣ ವನ್ನೂ ಅಲ್ಲಮನನ್ನುಳಿದ ಎಲ್ಲಾ ಶರಣರೂ ಒಪ್ಪಿದ್ದಾರೆ. ಮೂರ್ತಿ ಪೂಜೆಗೆ ಅಲ್ಲಮನ ಮತವಿಲ್ಲ ಎಂಬುದು ಸ್ಪಷ್ಟವಾಗುತ್ತದಲ್ಲದೆ ಷಟ್‌ಸ್ಥಲ ಸಿದ್ಧಾಂತಗಳನ್ನೂ ಅವನು ಒಪ್ಪಿಲ್ಲ. ಎಲ್ಲರೂ ಲಿಂಗಧಾರಿಗಳಾಗಬೇಕು ಎಂದರೆ ''ಎನಗೊಂದು ಲಿಂಗ, ನಿನಗೊಂದು ಲಿಂಗ, ಮನೆಗೊಂದು ಲಿಂಗ ಹೋಯಿತ್ತಲ್ಲಾ ಭಕ್ತಿಜಲವಕೂಡಿ ಉಳಿ ಮುಟ್ಟದ ಲಿಂಗ ಮನಮುಟ್ಟಬಲ್ಲುದೇ?'' ಎಂದು ಪ್ರಶ್ನಿಸಿ 'ಮಾನವರು ದೇಗುಲದೊಳಗೊಂದು ದೇವರ ಮಾಡಿದರೆ ಆನುಬೆರಗಾದೆನಯ್ಯಾ" ಎಂದು ಆಶ್ಚರ್ಯ ಸೂಚಿಸುತ್ತಾನೆ. ಎಲ್ಲರೂ ಲಿಂಗಧಾರಿಗಳಾದರೇನು, ಜ್ಞಾನಿಗಳಾಗದಿದ್ದ ಮೇಲೆ ''ಹೊಟ್ಟೆಯ ಮೇಲೊಂದು ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನು ಹಸಿವು ಹೋಹುದೇ ?" ಹೀಗೆ ಸಂಬಂಧವಿಲ್ಲದ ವ್ಯವಹಾರ ವಾಗುತ್ತದೆ ಎನ್ನುತ್ತಾನೆ.

ಕಲ್ಲು ದೇವರೆಂದು ಜನ ಪೂಜಿಸುವ ಬಾಲಬುದ್ಧಿ ಆ ಬೆಂಕಿಯ ವ್ಯಕ್ತಿತ್ವಕ್ಕೆ ಸರಿತೋರಲಿಲ್ಲ. ''ಕಲ್ಲು ದೇವರೆಂದು ಪೂಜಿಸುವರು, ಆಗದು ಕಾಣಿರೋ ಅಗಡಿಗ ರಾದಿರಲ್ಲಾ ?" ದೇವರನ್ನು ನಿರ್ಜೀವ ಕಲ್ಲಿನಲ್ಲಿ ಕಾಣುವ ಜನ ಸಜೀವಗಳಲ್ಲಿ ಕಾಣದಾದರಲ್ಲಾ ಎಂದು ಅವನ ಚಿಂತೆ! ದೇವರನ್ನೇ ಪ್ರಶ್ನಿಸುತ್ತದೆ ಅವನ ಮನ 'ಮನವೇ ಲಿಂಗವಾದ ಬಳಿಕ ನೆನೆಹುದಿನ್ನಾರನಯ್ಯಾ....' ಎನ್ನು ತ್ತಾನೆ. ಈ ತಾದಾತ್ಮ ಭಾವನೆ ಅವನನ್ನು 'ಒಲುಮೆಯ ಕೂಟಕ್ಕೆ ಹಾಸಿಗೆಯ ಹಂಗೇಕೆ ? ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ ? ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನುಂಟೇ ?'' ಎನ್ನುವತ್ತ ಕರೆದೊಯ್ಯುತ್ತದೆ. ಅಲ್ಲಿ ''ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆಯುವ'' ಪೂರ್ಣದಲ್ಲಿ ಪೂರ್ಣವಾಗುವ ದರ್ಶನ ವನ್ನು ಕೊಡುತ್ತದೆ. ದೇವ-ಮಾನವರಲ್ಲಿ ಅವನು ಬೇಧಭಾವವನ್ನು ಎಣಿಸಲೇ ಇಲ್ಲ. ದೇವನಿಗಿಂತ ಮಾನವನೇ ಹಿರಿಯನೆನ್ನುವಂತೆ ''ನಾ ದೇವನಲ್ಲದೆ ನೀ ದೇವನೇ'' ಎಂದು ಗುಡುಗುತ್ತಾನೆ.

ಇಂತಹ ವ್ಯಕ್ತಿವಿನಯಶೀಲನೂ ಆಗಿದ್ದನೆನ್ನುವುದು ಅವನ ವ್ಯಕ್ತಿತ್ವಕ್ಕೆ ಮೆರುಗನ್ನೀಯುತ್ತದೆ. ಅಕ್ಕಮಹಾ ದೇವಿ ಕಿರಿಯಳಾದರೂ ಆಕೆಯನ್ನು ವಂದಿಸಿದ ಕೊಂಡಾ ಡಿದ ರೀತಿ- ಬಸವಣ್ಣನವರ ಬಗ್ಗೆ 'ನಿಮ್ಮ ಶರಣರ ಸಂಗನ ಬಸವಣ್ಣನ ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ' ಎನ್ನುವ ಹೃದಯ ತುಂಬಿದ ಮಾತುಗಳು. ಇದಲ್ಲದೆ 'ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ' ನಾನು ಹೇಳಿದುದೇ ಕೊನೆಯಲ್ಲ; ನಾನೇ ಹಿರಿಯನೂ ಅಲ್ಲ ಎನ್ನುವ ವಿನೀತ ನುಡಿ ಅವನ ಯಶೋಲತೆಯ ಪುಷ್ಪ ವಾಗಿ ಘಮಘಮಿಸುತ್ತದೆ. ಇನ್ನು ಅವನ ವಚನಗಳನ್ನು ಕುರಿತು ಬೇಂದ್ರೆಯವರು 'ಇಲ್ಲಿಯ ಕರ್ಕಶವಾದ ತರ್ಕ, ಸಹಜ ವಕ್ರವಾದ ಬೆಡಗು, ಹುಟ್ಟುಗನ್ನಡದ ವಿಡಾಯ, ಧೀರ ವಿಚಾರ, ಅಧ್ಯಾತ್ಮ ಸಾಹಸದ ಹಾಸ್ಯ, ಮಾತಿನ

ಸುಳಿವುಗಳಲ್ಲಿ ಜ್ಯೋತಿಯ ಹೊಳಹನ್ನು ಹುಟ್ಟಿಸುವ ಸರಸಸಜ್ಜನಿಕೆ—ಎನ್ನುತ್ತಾರೆ. ಅವರ ಈ ನುಡಿಗಳು ಅಲ್ಲಮನ ವಚನದ ಅಗತ್ಯವನ್ನು ಹೇಳುತ್ತವೆ. ಹಾಗೆಯೇ ಮುಗಳಿಯವರೂ ಸಹ 'ಪ್ರಭುದೇವನ ವ್ಯಕ್ತಿತ್ವ ಮತ್ತು ವಚನ ರಚನೆ ಕನ್ನಡ ವಚನವಾಙ್ಮಯಕ್ಕಲ್ಲದೆ ಭಾರತೀಯ ಹಾಗೂ ಜಾಗತಿಕ ಸಾಹಿತ್ಯಕ್ಕೆ ಅಸಾಧಾರಣ ತೇಜಸ್ಸುಳ್ಳ ಕಾಣಿಕೆಯಾಗಿರುತ್ತವೆ. ಆತ್ಮ, ಜ್ಞಾನ ಆನಂದಗಳು ಮಾತಿಗೆ ನಿಲುಕದ ವಿಷಯಗಳು ಎಂಬುದನ್ನು ಅರಿತೂ ಪ್ರಭುದೇವ ಬೆರಗಿನ ನುಡಿ ಬೆಡಗಿನ ವಚನಗಳಲ್ಲಿ ಅನುಭಾವದ ನಿರಾಕಾರವನ್ನು ನಿಲುಕುವಷ್ಟು ಮಾತಿನಲ್ಲಿ ಸಾಕಾರಗೊಳಿಸಿದ್ದಾನೆ. ಅವನಿಗೇ ಸಾಧ್ಯವಾದ ಘನತೆಯದು! ಅವನ ವಚನಗಳ ಬಹುಭಾಗವು ಆಧ್ಯಾತ್ಮಮಾರ್ಗಿಗಳಿಗೂ ಸುಲಭಗ್ರಾಹ್ಯವಲ್ಲ. ಅನುಭಾವದ ಆಳದಿಂದ ಜ್ಞಾನದ ಶಿಖರದಿಂದ ಉಸುರಿದ ಆ ಮಾತು ಆಡಿದ ಮಾತಲ್ಲ 'ಮಾತೆಂಬುದು ಜ್ಯೋತಿರ್ಲಿಂಗ' ಎಂಬುದನ್ನು ಸಾರ್ಥಕಪಡಿಸುತ್ತದೆ.

ಒಟ್ಟಿನಲ್ಲಿ ಅಲ್ಲಮಪ್ರಭು ಒಂದು ಮತ ಪಂಥಗಳಿಗೆ ಸೇರಿದವನಲ್ಲ. ಅವನದು ವಿಶ್ವ ವ್ಯಕ್ತಿತ್ವ, ವಿಶ್ವ ಮಾರ್ಗ, ಇಂತಹ ಬೆಂಕಿಯನ್ನು ಒಂದು ಪಂಥದವನೆಂದು ಸೆರಗಿಗೆ ಗಂಟು ಹಾಕಿದರೆ, ಬೆಳಕನ್ನೂ ಹೊತ್ತಿಸದೆ ಸೆರಗು ಸುಟ್ಟುಕೊಳ್ಳುವಂತಾಗುತ್ತದೆ. ಅಲ್ಲಮನ ಜ್ಞಾನಮಾರ್ಗ, ಪಂಥಾತೀತ ದೃಷ್ಟಿಎಂದಿಗಿಂತ ಹೆಚ್ಚಾಗಿ ಇಂದಿನ ಸಂಕೀರ್ಣ ಜಗತ್ತಿಗೆ ಆವಶ್ಯಕ. ಅವನ ಮಾರ್ಗ ಮಾನವ ಮಾರ್ಗವೇ ವಿನಾ ಮತ್ತಾವುದೂ ಅಲ್ಲ.

ಅಧಾರ ಸಾಹಿತ್ಯ :—
ಶೂನ್ಯ ಸಂಪಾದನೆ—ಗೂಳೂರು ಸಿದ್ಧವೀರಣ್ಣಾರಾಧ್ಯ.
ಸಾಹಿತ್ಯ ಸಂಶೋಧನೆ—ಬೇಂದ್ರೆ.
ಸಾಹಿತ್ಯ ಮತ್ತು ಯುಗಧರ್ಮ
ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ } ಅ. ನ. ಕೃ.
ಶರಣರ ಅನುಭಾವ ಸಾಹಿತ್ಯ; ಶೂನ್ಯಸಂಪಾದನೆ ಮತ್ತು ಶೂನ್ಯ ತತ್ವವಿಕಾಸ—ಡಾ|| ಹೆಚ್. ತಿಪ್ಪೇರುದ್ರಸ್ವಾಮಿ.
ಕನ್ನಡ ಸಾಹಿತ್ಯ ಚರಿತ್ರೆ—ಡಾ|| ರಂ. ಶ್ರೀ. ಮುಗಳಿ

# ಮಡಿಯೋಣ

ಬನ್ನಿರಿ ಬನ್ನಿರಿ ನೀವೆಲ್ಲಾ
ಒಂದಾಯಿತೆನ್ನಿರಿ ಭಾರತವೆಲ್ಲಾ ||ಪ||

ಜಗದಲಿ ಧರ್ಮವ ಬೆಳಗಿ
ಎಲ್ಲೆಲ್ಲೂ ಶಾಂತಿಯ ತೊಳಗಿ
ನಮ್ಮಯ ಬಾಳನು ಮೇಲೆತ್ತಿದ
ಭಾರತಕೆ ಎತ್ತುವ ಮಂಗಳಾರತಿಯ ||೧||

ಭಾರತಕಾಗಿ ದುಡಿಯೋಣ
ತ್ಯಾಗದ ಶೌರ್ಯವ ಮೆರೆಯೋಣ
ಶತ್ರುವಿನ ರಕ್ತವ ಹೀರೋಣ
ಸ್ವತಂತ್ರಕಾಗಿ ಮಡಿಯೋಣ ||೨||

ತರುಣರೆ ಬನ್ನಿರಿ ಸೇರಿರಿ
ದೇಶವ ಕಾಯುವ ಸೈನ್ಯವನು
ತರುಣಿಯರೆ ಬನ್ನಿರಿ ಹಾಡಿರಿ
ಕೋವಿಯ ಕತ್ತಿಯ ಗೀತೆಯನು ||೩||

ದೇಶ ದ್ರೋಹ ತೊಲಗಲಿ
ಅನ್ನದ ಕಾಲುವೆ ಹರಿಯಲಿ
ಜ್ಞಾನದ ದೋಣಿಯು ತೇಲಲಿ
ಎಂದೆಂದೂ ತ್ರಿವರ್ಣ ಧ್ವಜವು ಹಾರಾಡಲಿ ||೪||

— ಆರ್. ಎಸ್. ಲಿಂಗದೇವರು IX 'B'

# ಇನ್ನಾದರು ಬುದ್ಧಿಯ ಕಲಿ ನೀ ಪಾಕಿಸ್ತಾನ

ಒದಗಿ ಬಂದಿದೆ ಕದನ ವಿರಾಮ ।
ಎಂದಿಗು ಬೇಡ ನಮಗಾರಾಮ ॥

ಕಾಲನು ಕೆರೆದು ಯುದ್ಧಕೆ ಬಂದ
ಪಾತಕಿಗಳಿಗಾಯ್ತು ಬಲು ಚೆಂದ ;
ಆದರು ಬಿಡುವರೆ ಸಂಚನು ಅವರು
ಕಾದಲು ಧೈರ್ಯವಿನಿತಿಲ್ಲದವರು ।

ಗಡಿಯೊಳು ಕಾಣದ ತೆರೆದೊಳು ತೆವಳಿ
ಬರುವರು, ಸವಿವರು ಬಲು ಬವಳಿ ;
ಚಡಪಡಿಸುತಲಲ್ಲಿನ ನಾಯಕವರರು
ಬಾಯ್ಗೆ ಬಂದುದನೊದರುವರು ।

ಶಾಂತಿಯನರಸುವ ಜನಪದವೆಂದು
ಮೇಲೆರಗಲು ಬಂದರೆ ನಿಮಗೆಂದೂ ;
ಮೊನ್ನೆಯ ಹೊಡೆತಕ್ಕಿಂತಲು ಮಿಗಿಲು
ಏಟಿನ ಮೇಲೇಟೆಂಬುದೆ ಭುಗಿಲು ।

ಲೋಕಕು ಅರಿವಾಗಿದೆ ನಿಮ್ಮಾ ಪಾಪದ ಫಲವು
ಪಾಠವ ಕಲಿಸಿದೆ ಚಚ್ಚರದಿಂದಲೆ ನಮ್ಮಯ ಬಲವು ;
ನಿಮ್ಮಯ ಮಿತ್ರರು ಚೀನರು ತಾನೆ
ಕಂತೆಗೆ ತಕ್ಕ ಬೊಂತೆಯು ಸಮನೆ !

ಹಳಸಿದ ಹಿಟ್ಟಿಗೆ ಹಸಿದಿಹ ನಾಯಿ
ತತ್ಕಾಲಕೆ ಪಾಕೀ—ಚೀನೀ ಭಾಯಿ :
ಇಡಿಯ ಜಗತ್ತಿನ ಶಾಂತಿಯ ದೃಷ್ಟಿ
ಆಗಿದೆ-ಎರಡಕು ವಕ್ರಕುದೃಷ್ಟಿ ।

ಯುದ್ಧಕಾಲದೊಳು ಶಸ್ತ್ರಾಭ್ಯಾಸ
ಕಲಿಯಲು ಹೋಗಿಹರದು ಆಭಾಸ ;
'ಚೋರಗುರುವಿಗೆ, ಚಂಡಾಲ ಶಿಷ್ಯ'
ಎಂಬ ನಾಣ್ಣುಡಿಯ ತೆರ ವೈಶಿಷ್ಟ್ಯ ।

ಇನ್ನಾದರು ಬುದ್ಧಿಯ ಕಲಿ ನೀ ಪಾಕಿಸ್ತಾನ
ವಿಶ್ವಸಂಸ್ಥೆಯೊಳು ಗಳಿಸಿಕೊ ಯೋಗ್ಯಸ್ಥಾನ;
ಭಾರತಯೋಧರ ವೀರಪರಾಕ್ರಮದರಿಕೆ
ಆಗಲಿ ನಿನಗೆಂದೆಂದಿಗು ಅದು ಬೆಚ್ಚರಿಕೆ ।

—'ಪುಲಿಕೇಶಿ'

# ಎರಡು ಮದುವೆ




ಲೇಖಕರು :

**ಭಾರತೀರಮಣಾಚಾರ್ಯ**

ಹಿಂದೀ ಸಾಹಿತ್ಯ ಭಂಡಾರದಲ್ಲಿ ಕೊಹಿನೂರ್ ವಜ್ರದಂತೆ ರಾರಾಜಿಸುವ ಕೃತಿ ರಾಮಚರಿತ ಮಾನಸ. ಇದನ್ನು ಬರೆದವರು ಗೋಸ್ವಾಮೀ ತುಳಸೀ ದಾಸರು. ಇವರ ಹೆಸರಿನ ಮೇಲೆ ಈ ಕಾವ್ಯಕ್ಕೆ ತುಲಸೀ ರಾಮಾಯಣವೆಂಬ ಅಂಕಿತವೂ ಇದೆ.

ಈ ರಾಮಚರಿತಮಾನಸದಲ್ಲಿ ಎರಡು ಮದುವೆಗಳ ವಿಸ್ತಾರವಾದ ವರ್ಣನೆ ಬರುತ್ತದೆ. ಒಂದು ಶಿವ ಪಾರ್ವತಿಯರ ಮದುವೆ ಇನ್ನೊಂದು ಸೀತಾರಾಮರ ವಿವಾಹ. ಮೊದಲನೆಯ ಮದುವೆಯಲ್ಲಿ ಹೆಣ್ಣು ತಾನೊಲಿದ ಗಂಡನನ್ನು ತಂದೆ ತಾಯಿ, ಬಂಧುಬಳಗದವರು ವಿರೋಧಿಸಿದರೂ, ಸ್ವತಃ ತಾನು ಮದುವೆಯಾಗ ಬಯಸಿದ ಗಂಡೇ ಒಪ್ಪದೆ ಇದ್ದರೂ ತನ್ನ ಪ್ರೇಮದ ಬಲದ ಮೇಲೆ, ತಪಶ್ಚರಣೆಯಿಂದ ಗಂಡಿನ ಮನಸ್ಸನ್ನು ಒಲಿಸಿಕೊಂಡು ಮದುವೆಯಾಗುತ್ತಾಳೆ. ಎರಡನೆಯ ವಿವಾಹದಲ್ಲಿ ಹೆಣ್ಣು ಗಂಡಿನ ಸಾಕ್ಷಾತ್ಕಾರವು ರಮಣೀಯವಾದ ಹೂದೋಟದಲ್ಲಿ ಅತ್ಯಂತ ಮನಮೋಹಕವಾದ ವಸಂತಋತುವಿನ ಪ್ರಾತಃಕಾಲದಲ್ಲಿ ನಡೆಯುತ್ತದೆ. ಗಂಡು ಯಾರೆಂದು ತಿಳಿಯದಿದ್ದರೂ ಅವನ ಸೌಂದರ್ಯವು ಹೆಣ್ಣಿನ ಚಿತ್ತವನ್ನು ಸೆರೆ ಹಿಡಿದಿದೆ. ಹೆಣ್ಣಿನ ಸೌಂದರ್ಯವಂತೂ ಗಂಡಿನ ಮನಸ್ಸನ್ನು ಸೂರೆಗೊಂಡಿದೆ. ಪರಸ್ಪರ ಅವಲೋಕನದಿಂದ ಇವರ ಮನಸ್ಸಿನಲ್ಲಿ ಅಂಕುರಿಸಿದ ಬಯಕೆಯನ್ನು ಕವಿ ಬಹು ರಮ್ಯವಾಗಿ ವರ್ಣಿಸಿದ್ದಾನೆ.

ಸೀತೆಯು ಗೌರಿಯನ್ನು ಭಕ್ತಿಯಿಂದ ಪೂಜಿಸಿ ಏಕಾಂತದಲ್ಲಿ ಹೃದಯವನ್ನು ಮಾರಿಕೊಂಡಿರುವ ಗಂಡೇ ತನಗೆ ಪತಿಯಾಗಿ ದೊರಕಲೆಂದು ವರವನ್ನು ಬೇಡಿಕೊಳ್ಳುತ್ತಾಳೆ. ಆಗ ಗೌರಿಯು

> ಸುನು ಸಿಯ ಸತ್ಯ ಅಸೀಸ ಹಮಾರೀ ।
> ಪೂಜಿಹಿ ಮನಕಾಮನಾ ತುಮ್ಹಾರೀ ॥

(ಕೇಳು ಸೀತೆ, ನನ್ನ ಆಶೀರ್ವಾದ ಸತ್ಯವಾಗುವುದು. ನಿನ್ನ ಮನಸ್ಸಿನ ಅಭಿಲಾಷೆ ಪೂರ್ಣವಾಗುವುದು) ಎಂದು ಅವಳು ಅನುಗ್ರಹಿಸುತ್ತಾಳೆ. ಸೀತೆಯ ವಾಮಭಾಗವು ಸ್ಫುರಿಸಿ ಮಂಗಳವನ್ನು ಸೂಚಿಸುತ್ತದೆ

ಇತ್ತ ರಾಮನು ಸಂಧ್ಯಾವಂದನೆಗೆಂದು ಸಂಜೆ ಕುಳಿತಿರುವಾಗ ಚಂದ್ರೋದಯವನ್ನು ಕಂಡಾಕ್ಷಣವೇ ಪ್ರಾತಃಕಾಲದಲ್ಲಿ ತಾನು ಕಂಡ ಮುಖಚಂದ್ರದ ಬಿಂಬ ಕಣ್ಣೆದುರಿನಲ್ಲಿ ಬಂದು ನಿಂತು ಮನಸ್ಸನ್ನು ಸೂರೆಗೊಳ್ಳುತ್ತದೆ. ಮಂತ್ರ ಮರೆತು ಹೋಗುತ್ತದೆ ತಾನು ಕಂಡ ಮುಖಚಂದ್ರನಿಗೂ, ಎದುರಿನಲ್ಲಿ ಕಾಣುವ ಚಂದ್ರನಿಗೂ ಉಪಮೆ ಸರಿಹೋಗುವುದೇ ಇಲ್ಲವೇ ಎಂಬ

ವಿಚಾರ ಪ್ರಿಯವಾಗುತ್ತದೆ. ಅದನ್ನೇ ಕುರಿತು ಕಾವ್ಯ ಮೀಮಾಂಸೆಯಲ್ಲಿ ತೊಡಗಿ ಲಕ್ಷ್ಮಣನೊಡನೆ ಹೇಳುತ್ತಾನೆ.

ಜನಮು ಸಿಂಧು ಪುನಿ ಬಂಧು ವಿಷ ದಿನ ಮಲೀನ
ಸಕಲಂಕು ।
ಸಿಯ-ಮುಖ ಸಮತಾ ಪಾವ ಕಿಮಿ ಚಂದ ಬಾಪುರೋ
ರಂಕ ॥

(ಸಮುದ್ರದಲ್ಲಿ ಹುಟ್ಟಿದ್ದಾನೆ. ವಿಷ ಇವನ ಸಹೋದರ, ಹಗಲೆಲ್ಲಾ ಕಾಂತಿಹೀನನಾಗಿರುವನಲ್ಲದೆ ಕಲಂಕ ಬೇರೆ ಇವನಲ್ಲಿದೆ. ಈ ದೋಷಗಳಾವುವೂ ಇಲ್ಲದ ಸೀತೆಯ ಮುಖದ ಹೋಲಿಕೆ ಈ ದರಿದ್ರ ಅದೃಷ್ಟಹೀನ ನಾದ ಚಂದ್ರನಿಗೆಲ್ಲಿ ಬಂತು ?) ಎಂದು ಈ ಮೀಮಾಂಸೆ ಯನ್ನೇ ಮುಂದುವರಿಸಿ

ಘಟಇ ಬಢಇ ವಿರಹಿನ ದುಖದಾಈ ।
ಗ್ರಸಇ ರಾಹು ನಿಜ ಸಂಧಿಹಿ ಪಾಈ ॥
ಕೋಕ-ಸೋಕ-ಪ್ರದ ಪಂಕಜದ್ರೋಹೀ ।
ಅವಗುನ ಬಹುತ ಚಂದ್ರಮಾ ತೋಹೀ ॥
ವೈದೇಹೀ ಮುಖ ಪಟತರ ದೀಹ್ನೇ ।
ಹೋಇ ದೋಷ ಬಡ ಅನುಚಿತಕೀಹ್ನೇ ॥

(ಕುಗ್ಗುತ್ತಾನೆ ಮತ್ತು ಹಿಗ್ಗುತ್ತಾನೆ. ವಿರಹಿ ಗಳಿಗೆ ದುಃಖವನ್ನುಂಟು ಮಾಡುತ್ತಾನೆ. ಅವಕಾಶ ಸಿಕ್ಕಾಗ ಹೊಂಚು ಹಾಕುತ್ತಿರುವ ರಾಹುವು ಇವನನ್ನು ಹಿಡಿಯುತ್ತಾನೆ. ಚಕ್ರವಾಕ ಪಕ್ಷಿಗಳ ಶೋಕಕ್ಕೆ ಕಾರಣನಾದವನು, ಕಮಲಗಳ ಶತ್ರು : ಹೀಗೆ, ಚಂದ್ರ! ವಿಚಾರ ಮಾಡಿದಷ್ಟು ನಿನ್ನಲ್ಲಿ ಅವಗುಣಗಳು ತುಂಬಿ ರುವುದು ತೋರುತ್ತದೆ. ವೈದೇಹಿಯ ಮುಖಬಿಂಬಕ್ಕೆ ನಿನ್ನ ಬಿಂಬದ ಹೋಲಿಕೆಯು ಸರ್ವಥಾ ಕೂಡುವುದಿಲ್ಲ. ಅಲ್ಲದೆ ಅದು ದೋಷದುಷ್ಟವಾಗುವುದು.)

ಹೀಗೆ ಸೀತೆಯ ಮುಖಕಾಂತಿಯನ್ನು ಸ್ಮರಿಸಿ ಅವಳ ಗುಣಕಥನವಲ್ಲೇ ಸಂಧ್ಯಾವಂದನೆ ಮುಗಿದು ಹೋಗುತ್ತದೆ. ಒಟ್ಟಿನಲ್ಲಿ ಈ ಪ್ರೇಮ ಎರಡು ಪಕ್ಷ ಗಳಲ್ಲಿ ಸಮಸಮವಾಗಿದೆ.

ಅದೇ ಶಿವಪಾರ್ವತಿಯರ ಪ್ರೇಮದಲ್ಲಿ ಹಾಗಿಲ್ಲ. ಶಿವನೋ,

ಅಗುನ ಅಮಾನ ಮಾತು ಪಿತು ಹೀನಾ ।
ಉದಾಸೀನ ಸಬ ಸಂಸಯ ಛೀನಾ ॥
ಜೋಗೀ ಜಟಿಲ ಅಕಾಮ ಮನ ।
ನಗನ ಅಮಂಗಲ ವೇಷ ॥
(ಅರ್ಥ ಸುಲಭವಾಗಿದೆ)
ಅದೇ ಪಾರ್ವತಿಯಾದರೋ

ಸುಂದರ ಸಹಜ ಸುಶೀಲ ಸಯಾನೀ ॥ ಮತ್ತು

ಸಬಲಚ್ಛನ ಸಂಪನ್ನ ಕುಮಾರಿಯಾಗಿದ್ದಾಳೆ. ಅಲ್ಲದೆ ಇವರ ಸೌಭಾಗ್ಯ ಅಚಲವಾದುದು. ಗಂಡನಿಗೆ ಅತ್ಯಂತ ಪ್ರಿಯಳಾಗಿ ಇರುವ ಸ್ವಭಾವದವಳು.

ಕನ್ಯೆಯ ಗುಣವನ್ನು ನೋಡಿ ತಂದೆತಾಯಿಯ ರಿಗೆ ಅಂದರೆ ಹಿಮವಂತ ಹಾಗೂ ಮೇನಕಾದೇವಿಯರಿಗೂ ಹಿಗ್ಗು. ಆದರೆ ಅಳಿಯನ ಗುಣಗಳನ್ನು ಕೇಳಿದಾಗ ಮನಸ್ಸಿನಲ್ಲಿ ಕೊರಗು. ಅಳಿಯನ ವಿಷಯವನ್ನು ಇಲ್ಲಿ ತಿಳಿಸಿರುವವರು ನಾರದರು. ನಾರದರ ಮಾತಿನಲ್ಲಿ ಶ್ಲೇಷಾರ್ಥವಿದೆ. ಪಾರ್ವತಿ ಒಂದು ಬಗೆ ಅರ್ಥಮಾಡಿ ಕೊಂಡು ಹಿಗ್ಗಿ ಒಲಿಯುತ್ತಾಳೆ. ತಂದೆತಾಯಿಯರು ಇನ್ನೊಂದು ಬಗೆಯಲ್ಲಿ ಅಂದರೆ ಮೇಲೆ ತೋರುವ ಅರ್ಥವನ್ನು ಗ್ರಹಿಸಿ ಕುಗ್ಗುತ್ತಾರೆ. ಅಗುನ ಅಮಾನ ಮಾತು ಪಿತು ಹೀನಾ ಎಂಬ ವಾಕ್ಯ ನಾರದರದು. ಅವರು ಅಗುನ ಎಂದಾಗ ತಂದೆಯಾದ ಹಿಮವಂತ ಗುಣವಿಲ್ಲದವನೆಂದುಕೊಂಡ, ಅದೇ ಪಾರ್ವತಿಯು ಗುಣಾತೀತನೆಂದು ಮೆಚ್ಚಿದಳು. ಅಮಾನನೆಂಬ ಶಬ್ದ ದಿಂದ ಮರ್ಯಾದೆ ಇಲ್ಲದವನೆಂದು ಹಿಮವಂತನಿಗನಿ ಸಿತು. ಅದೇ ಪಾರ್ವತಿಗಾದರೋ ಅಭಿಮಾನವನ್ನು ಗೆದ್ದ ಧೀರನೆಂದು ಸ್ಫುರಿಸಿತು. ಮಾತು ಪಿತು ಹೀನಾ ಎಂದು ಕೇಳಿದಾಗ ಕುಲಗೋತ್ರವಿಲ್ಲದ ಬೇವಾರ್ಸಿ ಅಂದುಕೊಂಡ ಹಿಮವಂತ. ಅದೇ ಸ್ವಯಂಭೂ ಎಂದ ರಿತಳು ಪಾರ್ವತಿ ಉದಾಸೀನನೆಂದಾಗ ಗಿರಿರಾಜನರಿ ತದ್ದು ಮನೆಮಠದ ಹಂಬಲವಿಲ್ಲದ ಒರಟು ಸ್ವಭಾವದವ ನೆಂದು. ಅದೇ ಗಿರಜೆಯು ನಿರ್ಲಿಪ್ತನೆಂದೂ, ಪ್ರಾಣಿ ಮಾತ್ರರ ಮೇಲೆ ಅವರವರ ಗುಣಕರ್ಮಗಳಿಗನುಸಾರ

ವಾಗಿ ಅನುಗ್ರಹ ಮಾಡುವವನೆಂದೂ ಗ್ರಹಿಸಿದಳು. ಸಬ ಸಂಸಯ ಛೀನಾ ಎಂಬ ಪದವನ್ನು ಕೇಳಿದಾಗ ಪರ್ವತರಾಜನಿಗರ್ಥವಾದುದು ಚಿಂತೆಯನ್ನೇ ಹೆಚ್ಚಿಕೊಳ್ಳದಿರುವ ಉದ್ಧಟನಿರಬೇಕೆಂದು ಅದೇ ಪರ್ವತರಾಜಕುಮಾರಿಗೆ ಈಗ ಸಂಶಯಲೇಶವೂ ಇಲ್ಲದ ಜಗದ್ಗುರುವೆಂದು.

ಜೋಗೀ ಎಂಬ ಪದಕ್ಕೆ ನಗಾಧಿಪತಿಯರಿತದ್ದು ಭಿಕ್ಷುಕನೆಂದು ಮಾತ್ರ; ಅದೇ ಉಮಾದೇವಿಗೆ ಇವನು ಪರಮಾತ್ಮನಲ್ಲಿ ನಿತ್ಯವೂ ರಮಿಸಿರುವ ಮಹಾನುಭಾವನೆಂದು. ಇದರಂತೆ ಜಟಿಲನೆಂಬ ಪದಕ್ಕೆ ಜಟಾಧಾರಿ ಎಂದೂ ಭಯಾನಕನೆಂದೂ ತಂದೆ ಅರಿತರೆ ಮಗಳು ಮಹಾತಪಸ್ವಿ ಎಂದರಿತು ಹಿಗ್ಗಿದಳು. ಅಕಾಮನುನನೆಂದು ಕೇಳಿದಾಕ್ಷಣವೇ ಮನಸ್ಸಿನಲ್ಲೂ ಕಾ ವಾಸನೆ ಇಲ್ಲದ ನಪುಂಸಕನೇ ಎಂದು ಮೈನಾಪತಿಯು ಕುಗ್ಗಿದರೆ ಪೂರ್ಣಕಾಮನೆಂದು ಉಮೆಯು ಹಿಗ್ಗಿದಳು. ನಗನ (ನಗ್ನ)ನೆಂದು ಕೇಳಿದಾಕ್ಷಣ ಪರ್ವತರಾಜನಿಗೆ ಬೇಸರವೇ ಆಯಿತು. ಇಂತಹ ನಿರ್ಲಜ್ಜನೇ ಅನ್ನಿಸಿತು. ಅದೇ ಪಾರ್ವತಿಯು ಮಾಯೆಯ ಆವರಣವನ್ನು ಹೊಂದದಿರುವ ದಿಗಂಬರನೆಂದರಿತು ಸಂತುಷ್ಟಳಾದಳು. ಒಟ್ಟಿನಲ್ಲಿ 'ಅಮಂಗಲ ವೇಷ'ವೆಂಬ ಪದವನ್ನು ಕೇಳಿದಾಗ ಆ ದಂಪತಿಗಳ ಮನಸ್ಸಿನ ಉದ್ವೇಗ ಮುಗಿಲು ಮುಟ್ಟುತ್ತದೆ. ಇಂಥ ಅಶುಭನಾದ ಅಳಿಯನಿಗೆ ಸಹಜಸುಂದರಿಯನ್ನು ಕೊಡುವುದೆಂತೆಂದು ಕೊರಗುತ್ತಾರೆ. ಆದರೆ ಸತಿಯು ಮಾತ್ರ ಪೂರ್ಣ ಮಂಗಳಮೂರ್ತಿ ಎಂದು ಅರ್ಥ ಮಾಡಿಕೊಂಡು ತನಗೆ ಬೇಕಾದ ವರನಾರೆಂದು ನಿರ್ಧರಿಸಿಬಿಡುತ್ತಾಳೆ.

ನಾರದರು ಹಿಮರಾಜನ ಮನೋಭಾವವನ್ನರಿಯುತ್ತಾರೆ. ತಂದೆತಾಯಿಯಿಲ್ಲದ ನಿರ್ಗತಿಕನ ಮನೆಗೆ ಕನ್ಯೆಯನ್ನು ಧಾರೆ ಎರೆಯುವುದು ಹೇಗೆ ? ಮಗಳು ಕಲ್ಯಾಣಗುಣಸಂಪನ್ನೆ — ವರ ಅಗುನ, ಗುಣಹೀನ. ಇವಳು ಜಗದ್ವಂದ್ಯೆ— ಅವನು ಅಮಾನ. ಇವಳು ತಂದೆತಾಯಿಗೆ ಯಶವನ್ನುಂಟುಮಾಡುವವಳು, ಅವನಿಗೆ ಅಪ್ಪ ಅಮ್ಮನೇ ಇಲ್ಲ; ಇವಳು ಸುಶೀಲೆ, ಅವನು ಉದಾಸೀನ. ಇವಳು ಸಯಾನೀ ಅಂದರೆ ತಿಳುವಳಿಕೆಯುಳ್ಳವಳು ಜ್ಞಾನಿ, ಅವನೋ ಸಂಸಯಛೀನಾ— ಸಂಶಯದಿಂದ ಕ್ಷೀಣಿಸಿಹೋಗಿರುವವನು. ಈ ಸಹಜಸುಂದರಿಯಾದ ಮಗಳಿಗೆ ಜೋಗಿ ಮತ್ತು ಜಟಾಧಾರಿಯೇ ಎಂದು ಭಾವಿಸಿರಬೇಕೆಂದು ಊಹಿಸಿ ತಮ್ಮ ಒಗಟನ್ನು ಬಿಡಿಸಿ ಈ ದೋಷಗಳೆಲ್ಲವೂ ಪರಮೇಶ್ವರನಲ್ಲಿ ಮಂಗಳಮಯವಾಗಿ ಪರಿಣಮಿಸುವುದೆಂದು ಉಪದೇಶಿಸುತ್ತಾರೆ. ಪಾರ್ವತಿ ಶಿವಪದಗಳಲ್ಲಿ ಅನುರಕ್ತಳಾಗುತ್ತಾಳೆ. ಹಿಮವಂತ ಅಂತಹ ವರನನ್ನು ತಂದು ನಾನೆಲ್ಲಿ ಮಗಳಿಗೆ ಮದುವೆ ಮಾಡಲು ಸಾಧ್ಯವಾದೀತೆಂದು ಕೊರಗಲು ತೊಡಗುತ್ತಾನೆ.

ಇಲ್ಲಿ ಹೆಣ್ಣಿಗೆ ಬೇಕಾಗಿರುವ ಗಂಡನ್ನು ದೊರಕಿಸಿಕೊಡಲು ತಂದೆತಾಯಿ ಬಂಧುಬಳಗವೆಲ್ಲ ಅಸಹಾಯಕತೆಯನ್ನು ತೋರಿ ಬೇಕಾದರೆ ಹೆಣ್ಣೇ ಒಲಿಸಿಕೊಳ್ಳಲೆಂದು ತಟಸ್ಥರಾಗಿ ನಿಂತುಬಿಡುತ್ತಾರೆ.

ಅದೇ ಸೀತೆಗೆ ತಕ್ಕ ಗಂಡನನ್ನು ದೊರಕಿಸಿಕೊಡಲು ಜನಕ ಮಹಾರಾಜನು ಸ್ವಯಂವರವನ್ನು ರಚಿಸುತ್ತಾನೆ. ಈ ಸ್ವಯಂವರದಲ್ಲಿ ವೀರಶುಲ್ಕವಾಗಿ ಸೀತೆಯನ್ನಿಟ್ಟು ವಿಶ್ವೈಕ ವೀರನನ್ನು ಪತ್ತೆಹಚ್ಚಲು ಹವಣಿಸುತ್ತಾನೆ. ಇದಕ್ಕಾಗಿ ಶಿವಚಾಪವನ್ನು ಹೆದೆ ಏರಿಸಬೇಕೆಂಬ ಷರತ್ತನ್ನು ಹಾಕುತ್ತಾನೆ. ರಾಮನ ಸೌಂದರ್ಯಕ್ಕೆ ಮನಸೋತಿದ್ದರೂ, ಎಲ್ಲರ ಒಲವೂ ರಾಮನ ಕಡೆ ಇದೆ ಎಂದು ತಿಳಿದುಬಂದರೂ, ಸೀತೆಯ ಮನಸ್ಸಿನ ಭಾವವನ್ನು ಇಂಗಿತಜ್ಞನಾಗಿ ತಿಳಿದಿದ್ದರೂ ಸಹ ಪರೀಕ್ಷೆ ಇಲ್ಲದೆ ಹೆಣ್ಣನ್ನು ಕೊಡಲು ಸಿದ್ಧನಿಲ್ಲ. ತಂದೆಯ ಈ ಕಠೋರ ನಿರ್ಣಯಕ್ಕೆ ಮಮ್ಮಲ ಮರುಗುತ್ತಾಳೆ ಹೆಣ್ಣು; ತವಕಿಸುತ್ತಾಳೆ ರಾಣಿ. ಸಮಾಧಾನ ಮಾಡುತ್ತಾರೆ ಸಖಿಯರು. ದೈವಯೋಗವೂ ಒದಗಿಬಂದುದರಿಂದ ತಂದೆಯ ಪ್ರತಿಜ್ಞೆಯೂ ಕೈಗೂಡುತ್ತದೆ, ಮಗಳ ಅಭೀಷ್ಟವೂ ಸಿದ್ಧಿಸುತ್ತದೆ. ಪುರಜನರಿಗೂ ಪರಿವಾರದವರಿಗೂ ಸಂತೋಷವಾಗುತ್ತದೆ.

ಅದೇ ಪಾರ್ವತಿಯ ವಿವಾಹ ಅಷ್ಟು ಸುಲಭವಲ್ಲ. ಶಿವನನ್ನೇ ಒಲಿಸಿಕೊಂಡು ಬಂದರೆ ತಂದೆ ಮದುವೆ ಮಾಡಿಕೊಡಲು ಸಮ್ಮತಿಸುವನು. ಆದರೆ ಶಿವನನ್ನು ಒಲಿಸುವುದೆಂತು ? ಸೇವೆ ಮಾಡಿದಳು, ಘೋರ ತಪಸ್ಸನ್ನಾಚರಿಸಿದಳು, ಕೋಮಲಾಂಗಿಯು ತಪಸ್ವಿಗಳೂ ನಾಚುವಂತಹ ವಿರಕ್ತ ಜೀವನವನ್ನು ನಡೆಸಿದಳು. ದೇವತೆಗಳು ಮನಕರಗಿ ಸಹಾಯಕ್ಕೆ ಬಂದರು.

ಪಾರ್ವತಿಗೆ ಪ್ರಸನ್ನರಾಗಿ ಸಹಾಯ ಮಾಡಿದರೆ ತಮ್ಮ ಸ್ವಾರ್ಥ ಸಾಧನೆಯೂ ಆಗುವುದೆಂದು ವಿಶ್ವಪ್ರಯತ್ನಮಾಡಿದರು. ತ್ರಿನೇತ್ರನನ್ನು ಕೆರಳಿಸಲು ಕಾಮದೇವನನ್ನು ಕಳಿಸಿದರು. ವಿಶ್ವವೇ ಮನ್ಮಥನ ಹಾವಳಿಯಿಂದ ತಲ್ಲಣಿಸಿತು. ಆದರೆ ವಿಶ್ವೇಶ್ವರನು ಸ್ಥಾಣುವಾಗಿಯೇ ಉಳಿದ. ರುದ್ರನಾಗಿ ಕಾಮದಹನ ಮಾಡಿ ಕಾಮಾರಿಯಾದ. ಮುಂದೆ ಗತಿ ?

ಪಾರ್ವತಿ ಎದೆಗುಂದಲಿಲ್ಲ. ಸಪ್ತರ್ಷಿಗಳು ಈ ಸಮಾಚಾರವನ್ನು ಬಣ್ಣ ಕಟ್ಟಿ ವರ್ಣಿಸಿ ಪಾರ್ವತಿಯ ಪ್ರೀತಿಯನ್ನಳಿಯಲು ಯತ್ನಿಸಿ ವಿಫಲರಾದರು. ಸ್ವಯಂ ಮಹಾದೇವನೇ ಬಂದು ಶಿವನನ್ನು ದೂಷಿಸಿ ವಿರಕ್ತಿಯನ್ನುಂಟುಮಾಡಲು ಯತ್ನಿಸಿ ವಿಫಲನಾದ. ವಿವಶನಾಗಿ ರಾಮನ ಆಜ್ಞೆಗೆ ಮನಸೋತು, ಹೆಣ್ಣಿನ ಪ್ರೇಮಕ್ಕೆ ಒಲಿದು ಮದುವೆಯಾದ.

ಈ ಮದುವೆಯ ದಿಬ್ಬಣವನ್ನು ಕವಿ ವರ್ಣಿಸಿದ್ದಾನೆ. ಕಂಡರೇ ಭಯ ನಗರದ ನರನಾರಿಯರಿಗೆ. ಅಳಿಯನನ್ನು ಕಂಡಾಗ ಮಹಾಮಹಿಮೆಯನ್ನು ಮರೆತು ಮಗಳ ದುರ್ಗತಿಗೆ ಮರುಕಗೊಳ್ಳುತ್ತಾಳೆ ಮೈನಾ. ಮಕ್ಕಳು ಮರಿಗಳೆಲ್ಲಾ ಹೆದರಿ ಅಡಗಿಕೊಳ್ಳುತ್ತವೆ ಅಡಿಗೆಯ ಮನೆಯಲ್ಲಿ. ಸುಮಂಗಲಿಯರ ಬಾಯಿಂದ ನುಸುಳಿ ಬರುತ್ತಿದ್ದ ಮಂಗಳಗೀತೆಯು ಅಲ್ಲೇ ಹುದುಗಿ ಹೋಗುತ್ತದೆ. ಹೆಚ್ಚೇಕೆ ಅಮಂಗಳಸೂಚಕವಾಗಿ ಮಂಗಲನೀರಾಜನವು ನೆಲಕ್ಕುರುಳಿಬಿಡುತ್ತದೆ. ಇವನ್ನೆಲ್ಲ ಕಂಡು ಮಮ್ಮಲ ಮರುಗಿ ಮೈನಾದೇವಿಯು ಹೇಳುತ್ತಾಳೆ. ಮಗಳೇ,

ತುಮ್ಹ ಸಹಿತ ಗಿರಿತೇಂ ಗಿರವು ಪಾವಕ
ಜರಉಂ ಜಲನಿಧಿ ಮಹಂ ಪರಉಂ ||
ಘರ ಜಾಉ ಅಪಜಸ ಹೋಉ ಜಗ ಜೀವತ
ವಿವಾಹ ನ ಹೌಂ ಕರಉಂ ||

(ಮಗಳೇ ! ನಿನ್ನೊಡನೆ ಬೆಟ್ಟದಿಂದ ಬಿದ್ದು, ಬೆಂಕಿಯಲ್ಲಿ ಬೇಯಲೂ, ಜಲನಿಧಿಯಲ್ಲಿ ಮುಳುಗಲೂ ಸಿದ್ಧಳಿದ್ದೇನೆ. ಮನೆ ಹಾಳಾಗಲಿ, ಬರಬಾರದ ಅಪಕೀರ್ತಿ ಬರಲಿ ನಾನು ಬದುಕಿದ್ದೂ ಈ ಮದುವೆಯಾಗುವುದನ್ನು ನೋಡಲಾರೆ) ಹೀಗೆಂದು ಗೋಳಿಡುತ್ತಾಳೆ.

ಮದುವೆಯ ಮನೆ ದಿಬ್ಬಣ ಬಂದಾಗ ರೋಧನದ ಕ್ರೀಡಾಂಗಣವಾಗುತ್ತದೆ. ಆಗ ಮಗಳು ತಾಯಿಗೆ ಸಮಾಧಾನ ಹೇಳಬೇಕಾಗುತ್ತದೆ. ಏನು ಸಮಾಧಾನ ಹೇಳಬೇಕು ?

ಕರಮು ಲಿಖಾ ಜೋ ಬಾಉರ ನಾಹೂ |
ತೌ ಕತ ದೋಷ ಲಗಾಇಯ ಕಾಹೂ ||
ತುಮ್ಹ ಸನ ಮಿಟಇ ಕಿ ವಿಧಿಕೇ ಅಂಕಾ |
ಮಾತು ವ್ಯರ್ಥ ಜನಿ ಲೇಹು ಕಲಂಕಾ ||

(ಅಮ್ಮ ನನ್ನ ಹಣೆಯಲ್ಲಿ ಇಂತಹ ಹುಚ್ಚನೇ ಗಂಡನಾಗಬೇಕೆಂದು ಬ್ರಹ್ಮ ಬರೆದಿದ್ದಾನೆ. ಆದ್ದರಿಂದ ವ್ಯರ್ಥವಾಗಿ ಯಾರಮೇಲೋ ತಪ್ಪು ಹೊರಿಸಿದರೆ ಏನು ಪ್ರಯೋಜನ ? ವಿಧಿಲಿಖಿತವನ್ನು ತಿದ್ದಲು ನಿನಗೆ ಸಾಧ್ಯವೆ ? ಆದ್ದರಿಂದ ವ್ಯರ್ಥವಾಗಿ ಕಲಂಕಿತಳಾಗಬೇಡಮ್ಮ )

ಇಷ್ಟು ಹೇಳಿದರೂ ಹೆತ್ತ ಕರುಳಿಗೆ ಸಮಾಧಾನವಿಲ್ಲ. ದೈವವನ್ನು ಹಳಿದು ಕೊರಗುತ್ತದೆ. ಆಗ ನಾರದನು ಬಂದು ತ್ರಿಕಾಲಜ್ಞರಾದ ಕಾರಣ ಪಾರ್ವತಿಯ ಪೂರ್ವಜನ್ಮದ ಕತೆಯನ್ನು ಹೇಳಿ ಅವಳ ಸ್ವರೂಪವನ್ನು ತಿಳಿಸಬೇಕಾಗುತ್ತದೆ.

ಮೈನಾ ಸತ್ಯ ಸುನಹು ಮಮ ಬಾನೀ |
ಜಗದಂಬಾ ತವಸುತಾ ಭವಾನೀ ||
ಅಜಾ ಅನಾದಿ ಶಕ್ತಿ ಅವಿನಾಶಿನಿ |
ಸದಾಸಂಭು-ಅರಧಂಗ-ನಿವಾಸಿನಿ ||
ಜಗಸಂಭವ ಪಾಲನ ಲಯ ಕಾರಿನಿ |
ನಿಜ ಇಚ್ಛಾ ಲೀಲಾ ವಪು ಧಾರಿನಿ ||

(ಮೈನಾ ! ನನ್ನ ಮಾತು ಸತ್ಯ. ಕೇಳು, ಈಕೆ ಭವಾನೀ, ನಿನ್ನ ಮಗಳು ಜಗನ್ಮಾತೆ. ಹುಟ್ಟು ಸಾವಿಲ್ಲದ ಅನಾದಿ ಶಕ್ತಿ. ಯಾವಾಗಲೂ ಶಂಭುವಿನ ಅರ್ಧಾಂಗಿಯೇ ! ಜಗತ್ತಿನ ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣಳಾದವಳು. ಕೇವಲ ತನ್ನ ಇಚ್ಛೆಯಿಂದ ಲೀಲಾವಪುವನ್ನು ಧರಿಸಿರುವಳು.)

ಹೀಗೆ ದಾಕ್ಷಾಯಣಿಯ ಸ್ವರೂಪವನ್ನೂ ಪೂರ್ವಜನ್ಮದ ವೃತ್ತಾಂತವನ್ನೂ ತಿಳಿಸಿದ ಮೇಲೆ ಮಗಳೆಂಬ

ಭ್ರಮೆ ದೂರವಾಗುತ್ತದೆ. ಜ್ಞಾನೋದಯವಾಗುತ್ತದೆ. ಭಕ್ತಿ ಕೆರಳುತ್ತದೆ. ಪುನಃ ಪುನಃ ಮಗಳ ಕಾಲಿಗೆರಗಿ ಸ್ತುತಿಸುತ್ತಾರೆ. ತಂದೆ ತಾಯಿ ಬಂಧು ಬಳಗ ಆಗೆಲ್ಲಿ? ಎಲ್ಲರೂ ಸೇರಿ ನಿತ್ಯಸುಮಂಗಲಿಯಾದ, ಗಿರಜೆಯ ನಿತ್ಯ ಕಲ್ಯಾಣ ಮೂರ್ತಿಯಾದ ಗಿರಿಜಾರಮಣನ ಕಲ್ಯಾಣ ಮಹೋತ್ಸವವನ್ನು ಆಚರಿಸುತ್ತಾರೆ.

ಈ ಎರಡು ವಿವಾಹಗಳಲ್ಲಿಯೂ ಅನಂತರ ಬರುವ ವರ್ಣನೆ ಒಂದೇ ಸಮನಾದುದು. ಮಗಳನ್ನು ಧಾರೆ ಎರೆದು ಕೊಡುವುದರಿಂದ ಮೊದಲ್ಗೊಂಡು ಬೀಳ್ಕೊಡು ವವರೆಗೆ ಬಹು ಸೊಗಸಾಗಿ ರಸವತ್ತಾಗಿ ಒಂದೊಂದು ಸನ್ನಿವೇಶವನ್ನೂ ವರ್ಣಿಸುತ್ತಾನೆ.

ಹೀಗೆ ರಾಮಚರಿತಮಾನಸದಲ್ಲಿ ಹದಿನಾರು ವೃತ್ತಗಳು ಐವತ್ತಾರು ದೋಹಗಳು ಮತ್ತು ಇನ್ನೂರಾ ಇಪ್ಪತ್ತುನಾಲ್ಕು ಚಉಪಾಇಗಳಷ್ಟು ವಿಸ್ತಾರವಾಗಿ ಗಿರಿಜಾ ಕಲ್ಯಾಣದ ಕತೆಯನ್ನು ಪೋಣಿಸಿರುವುದು ಕವಿಯ ಪ್ರಬಂಧಪಟುತ್ವಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ಈ ಎರಡೂ ಕಲ್ಯಾಣ ಮಹೋತ್ಸವದ ವರ್ಣನೆಯಲ್ಲಿ ಕವಿಯು ತನ್ನ ಪ್ರತಿಭಾ ಹಾಗೂ ಪಾಂಡಿತ್ಯದ ಬಲದಿಂದ ಮಾನವೋಚಿತ ಸಕಲ ಮಾನಸಿಕ ವೃತ್ತಿಗಳ ಹೃದಯಂಗಮವಾದ ವರ್ಣನೆಯೊಡನೆ ಭಾರತೀಯ ಸಂಸ್ಕೃತಿಯ ಅತಿ ಮುಖ್ಯವಾದ ವಿಚಾರಪರಂಪರೆಯನ್ನು ಅಂದರೆ (1) ವಿವಾಹವು ಬ್ರಹ್ಮ ಘಟನೆ ಇದ್ದಂತೆ ನಡೆಯುವುದೇ ಹೊರತು ಜೀವನ ಇಚ್ಛೆಯಲ್ಲ, (2) ದಾಂಪತ್ಯವು ಜನ್ಮಜನ್ಮಾಂತರದಿಂದಲೂ ನಿಯತವಾದುದೇ ವಿನಾ ಆಕಸ್ಮಿಕವಲ್ಲ, (3) ವಿವಾಹದ ನಿಮಿತ್ತದಲ್ಲಿ ನಡೆಯುವುದು ಆ ಆದಿ ಅನಾದಿ ಶಕ್ತಿಯ ಲೀಲಾ ಮಹೋತ್ಸವವು, (4) ನೈಜವಾದ ಪ್ರೇಮವು ವಿವಾಹದಲ್ಲಿ ಪರ್ಯವಸಾನವಾಗಿ ಲೋಕಕಲ್ಯಾಣಕರವಾಗುತ್ತದೆ. ಮುಂತಾದ ವಿಷಯಗಳನ್ನು ಎತ್ತಿ ತೋರಿಸಿರುತ್ತಾರೆ.

ಇದೇ ಕಥಾವಸ್ತುವನ್ನು ಆಧಾರವಾಗಿಟ್ಟುಕೊಂಡು ತುಲಸೀದಾಸರು **ಪಾರ್ವತೀ ಮಂಗಲ** ಹಾಗೂ **ಜಾನಕೀ ಮಂಗಲ**ವೆಂಬ ಎರಡು ಖಂಡಕಾವ್ಯಗಳನ್ನೂ ಸಹ ರಚಿಸಿರುತ್ತಾರೆ.

---

ಸತ್ಯದಲ್ಲಿ ನಡೆವುದು ಶೀಲ
ಸತ್ಯದಲ್ಲಿ ನುಡಿವುದು ಶೀಲ
ಸಜ್ಜನ ಸದಾಚಾರದಲ್ಲಿ ವರ್ತಿಸಿ
ನಿತ್ಯನನರಿವುದೆ ಶೀಲ ಕಾಣಿಭೋ!
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವಿನಲ್ಲಿ॥

**—ತೋಂಟದ ಸಿದ್ಧಲಿಂಗ ಶಿವಯೋಗಿಗಳು.**

ಖಂಡಿಸದೆ ಕರಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕ್ಕೈದಲದ
ರಂಡೆಯಾಳುವಳೆ ಸರ್ವಜ್ಞ॥

**—ಸರ್ವಜ್ಞಕವಿ.**

ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮದೇವ॥

**—ಬಸವಣ್ಣನವರು.**

# ವಾಲ್ಮೀಕಿಯ ಸೀತೆ

ಲೇಖಕರು: **ಶ್ರೀ ಮ. ಮಲ್ಲಪ್ಪ**
ಜ್ಞಾನಮಂದಿರ, ಹಲಗೂರು

ಆದಿ ಕವಿ ವಾಲ್ಮೀಕಿಯ ಕಾವ್ಯದ ನಾಯಕಿಯು ಸೀತೆ. ನಾಯಕನ ಉದಾತ್ತ ಚಿತ್ರದಂತೆಯೇ ನಾಯಕಿಯ ಉದಾತ್ತ ಚಿತ್ರವೂ ಬಂದಿದೆ. ಭಾರತ ಸ್ತ್ರೀಯರ ಆದರ್ಶದಲ್ಲಿ ಸೀತೆಯನ್ನು ಸ್ವಾಮಿ ವಿವೇಕಾನಂದರು ಸೇರಿಸಿದ್ದಾರೆ. ಸೀತೆಯ ಜೀವನ ಅದಮ್ಯವೂ, ಅಗಮ್ಯವೂ ಆಗಿರುವುದು ಗೊತ್ತಾಗುತ್ತದೆ. ಸೀತಾಯಾಶ್ವಂತಂ ಮಹತ್ ಎಂದು ವಾಲ್ಮೀಕಿಯು ಹೇಳಿದರೆ, ಪ್ರಪಂಚದ ಕಾವ್ಯನಾಯಕಿಯರಲ್ಲಿ ಪ್ರಸಿದ್ಧರಾದ ನಾಯಕಿಯರ ಮಧ್ಯೆ ಸೀತಾದೇವಿ ಅಗ್ರ ಗಣ್ಯಳು ಎಂದು 'ಆದಿ ಕವಿ ವಾಲ್ಮೀಕಿ' ಕರ್ತೃಕಗಳು ಹೇಳಿದ್ದಾರೆ. ಮನುಕುಲದ ಮಹಾ ಪುರುಷನು ರಾಮನಾದರೆ ಮಹಾಮಾನಿನಿಯು ಸೀತೆಯಾಗಿದ್ದಾಳೆ. ಉಷೆಯಂತೆ ಸೀತೆಯ ಚರಿತ್ರೆಯು ನಿತ್ಯ ನೂತನವಾಗಿದೆ. ಅರಸನ ಮಗಳಾಗಿ ಜನಿಸಿ ರಾಜಕುಮಾರನ ಕೈಹಿಡಿದರೂ ರಾಜಭೋಗದ ಸಾರಿಗೆಯಲ್ಲಿಯೇ ಸಾಗುವಂತಹ ಹಿರಿಯ ಭಾಗ್ಯವು ದೊರಕಲಿಲ್ಲ.

ಸೀತೆಯು ಧೀರೆ, ಮಹಾತ್ಮಳು, ಸತ್ಯ ಸಂಗಿನಿಯು ಎಂಬುದು ಆದಿ ಕಾವ್ಯವನ್ನು ಅವಲೋಕಿಸಿದವರಿಗೆ ಗೊತ್ತಾಗುತ್ತದೆ. 'ಈ ನನ್ನ ಪುತ್ರಿಯು ಸೀತೆ. ನಿನ್ನ ಸಹಧರ್ಮಿಣಿ' ಎಂದ ಜನಕರಾಜನು ಸೀತೆಯ ಕೈಯನ್ನು ರಾಮನ ಕೈಯ್ಯಲ್ಲಿ ಇಟ್ಟ ವೇಳೆಯಲ್ಲಿ ರಾಮನೂ ಸೀತೆಯೂ ಇನ್ನೂ ಚಿಕ್ಕವರು; ಆದರೂ ಆಕೆಗೆ ಗೃಹಸ್ಥನ ಸಂಗಡಿಗಳುಎಂಬುದು ಗೊತ್ತು. ಪಿತೃಕುಲದ ಶ್ರೇಷ್ಠತೆಯ ಭಾವನೆಯಿಂದ ಆತನ ಧರ್ಮದ ಅನವರತ ವೀಕ್ಷಣೆಯಿಂದ ಇದರ ಲಕ್ಷ್ಯ. ಆತನ ಪತ್ನಿಯ ಸದ್ವರ್ತನೆಯ ಆದರ್ಶದಿಂದ ಸೀತೆಯು ಧರ್ಮ ದೇವತೆಯಂತೆ ಸ್ಥಿತಳಾಗಿದ್ದಳು. ಆ ಕಾರಣವೇ ಆಕೆಯು ಅರಮನೆಯಲ್ಲಿ ಗಂಡನ ಜೊತೆಯಲ್ಲಿ ಸುಖದಿಂದಿರುವುದಕ್ಕೆ ಎಂತೋ ಅಂತೆಯೇ ಅರಸನ ಸಂಗಡ ಅರಣ್ಯದಲ್ಲಿ ಕಷ್ಟವನ್ನು ಅನುಭವಿಸುವುದಕ್ಕೂ ಸಿದ್ಧಳಾಗಿದ್ದಳು. ನೀನು ಎಲ್ಲಿಗೆ ಹೋದರೆ ಅಲ್ಲಿಗೆ ನಾನು ಬರುತ್ತೇನೆ ಎಂದು ಗಂಡನಿಗೆ ಹೇಳುವುದು ಉಚಿತವೆಂದು ತಿಳಿದು ಸೀತೆಯು ಆದರಂತೆ ಆಚರಿಸುತ್ತಾಳೆ. ಆಕೆಯ ಮಾತನ್ನು ಕೇಳಿದ ರಾಮನು ಆಕೆಯ ಪ್ರೇಮ ಎಂತಹುದು ಎಂಬುದನ್ನು ಅರಿಯುತ್ತಾನೆ. 'ನಿನ್ನ ಬಯಕೆಯಂತೆ ವರ್ತಿಸು. ಈ ನಡತೆಯು ನಿನಗೆ ತಕ್ಕುದು. ನಿಜವಾಗಿಯೂ ನೀನು ನಿಮ್ಮ ಪಿತೃವು ಹೇಳಿದಂತೆ ನನ್ನ ಸಹಧರ್ಮಿಣಿ ಆಗುವೆ' ಎಂದು ರಾಮನು ಹೇಳುತ್ತಾನೆ. ತನ್ನ ಮನಸ್ಸಿನ ನಿರ್ಧಾರವನ್ನು ತಿಳಿಸುವುದರಲ್ಲಿ ಹಿಂಜರಿಯುವವಳಲ್ಲ; ಸತ್ಯಸಾಧಕಳಂತೆ ಸಾಗುತ್ತಾಳೆ. ತಾನು ಕಾಡಿಗೆ ಹೋಗುವಂತೆ ತನ್ನ ಜಾತಕದಲ್ಲಿದೆಯೆಂದೂ ಗಂಡನನ್ನು ಹೆಂಡತಿಯು ನೆರಳಿನಂತೆ ಅನುಸರಿಸುವುದು ಕರ್ತವ್ಯವೆಂದೂ ಸಾಗುವ ಹೆಂಡತಿಯನ್ನು ಬಿಟ್ಟು ಹೋಗುವುದು ಕಳಂಕವೆಂದೂ ರಾಮನಿಗೆ ಸೀತೆಯು ಹೇಳುತ್ತಾಳೆ.

ಭಾರತೀಯ ಸತೀತ್ವ ಸಂಸ್ಕೃತಿಯ ಪ್ರತಿ ಅವತಾರವಾಗಿ ಬೆಳಗುವ ಸ್ತ್ರೀಯನ್ನು ನಮ್ಮ ಕಣ್ಣ ಮುಂದೆ ಕವಿಯು ತಂದಿದ್ದಾನೆ. ಸೀತೆಯ ಚಿತ್ರವನ್ನು ಕವಿಯು ಕೊಡುವಾಗ ಆತನ ಪ್ರತಿಭೆಯು ಸೂಕ್ಷ್ಮ ಸ್ವಭಾವಗಳ ಪ್ರಕಟಣೆಯ ಮೂಲಕ ವ್ಯಕ್ತವಾಗುತ್ತದೆ. ಆಕೆಯು ನಾರು ಮಡಿಗಳ ಒರಟು ರೀತಿಯನ್ನು ಕಂಡಿದ್ದಳೋ ಇಲ್ಲವೋ ಆಗ ಅದನ್ನು ಕಂಡು ಬಲಿಗೆ ಬೆದರಿದ ಜಿಂಕೆ

ಯಂತೆ ನಿಂತುಕೊಂಡಳೆಂದು ಕವಿಯು ಉಪಮೆಯ ಮೂಲಕ ವಿವರಿಸಿದ್ದಾನೆ.

ಶ್ರೀರಿವ ರೂಪಿಣಿ ಎಂದು ಸೀತೆಯ ಸೌಂದರ್ಯವನ್ನು ಕವಿಯು ವರ್ಣಿಸಿದ್ದಾನೆ. ಮಹರ್ಷಿಯಾದ ಕವಿದೃಷ್ಟಿಯಲ್ಲಿ ಬಾಹ್ಯ ಸೌಂದರ್ಯಕ್ಕಿಂತ ಆಂತರಿಕ ಸೌಂದರ್ಯವು ಉತ್ತಮ. ಇವೆರಡರಲ್ಲಿಯೂ ಸೀತಾದೇವಿಗೆ ಮತ್ತಾರೂ ಸಾಟಿಯಿಲ್ಲ. ಆಕೆಯು ಅನುಪಮ ಚೆಲುವೆಯಾದಂತೆಯೇ ಪರಮ ಸಾತ್ವಿಕಳೂ ಆಗಿದ್ದಳು. ಇತರರು ಅಸಮಾಧಾನದ ನುಡಿಗಳನ್ನು ಆಡಿದರೂ ಅವರ ಹೃದಯ ಗತಿಯನ್ನು ತಿಳಿದು ತಾನೇ ಆ ಜಾಗದಲ್ಲಿದ್ದಂತೆ ಭಾವಿಸಿಕೊಂಡು ವಿಷಯ ವಿಮರ್ಶೆ ಮಾಡಿ ಸಹನ ಶಾಂತಿಗಳಿಂದ ವರ್ತಿಸುವುದು ಸಾತ್ವಿಕರ ಪ್ರಧಾನ ಲಕ್ಷಣ. ಈ ಸಾತ್ವಿಕತೆಯೇ ತನ್ನ ಗಂಡನ ಮನೆಯಲ್ಲಿ ಅನ್ಯೋನ್ಯ ಪ್ರೀತಿಯಿಂದ ಸಾಗುವಂತಾಯಿತು. ಸೀತಾ-ರಾಮರ ಪ್ರೇಮವು ದಿನದಿನವೂ ಅಭಿವೃದ್ಧಿಯಾಗಿ ಆ ಗಂಡ ಹೆಂಡಿರು ಪರಸ್ಪರ ಹೃದಯವನ್ನು ಅರಿತು ಅವರ ಇಂಗಿತಕ್ಕನುಸಾರವಾಗಿ ಸಾಗುತ್ತಿದ್ದರು. ಸೀತೆಯನ್ನು ಕವಿಯು ಅಭಿರಾಮಿಯೆಂದು ವರ್ಣಿಸಿದ್ದಾನೆ. ಕಾಡಿಗೆ ಹೊರಡುವಾಗ ಕೌಸಲ್ಯೆಯು ಸೀತೆಗೆ ರಾಮನ ವಿಷಯದಲ್ಲಿ ಸದ್ಗೃಹಿಣಿಯಾಗಿ ಸಾಗಬೇಕೆಂದು ಹೇಳಲು ಸೀತೆಯು ಅದಕ್ಕೆ ಉತ್ತರವನ್ನು ಕೊಡುತ್ತಾಳೆ— ಆರ್ಯೆಯಾದ ನೀನು ಉಪದೇಶಿಸಿರುವುದನ್ನೇ ನೆರವೇರಿಸಿ ಅದರಂತೆ ನಡೆದುಕೊಳ್ಳುತ್ತೇನೆ. ಗಂಡನ ವಿಚಾರದಲ್ಲಿ ಎಂತು ನಡೆದುಕೊಳ್ಳಬೇಕೆಂಬುದನ್ನು ನಾನು ಅರಿತಿದ್ದೇನೆ. ಅಲ್ಲದೆ ಕೇಳಿಯೂ ಇದ್ದೇನೆ. ಆರ್ಯೆಯಾದ ನೀನು ನನ್ನನ್ನು ಆ ಸಜ್ಜನರ ಸಂಗಡ ಹೋಲಿಸಬಾರದು. ಚಂದ್ರನಿಂದ ಬೆಳದಿಂಗಳನ್ನು ಬೇರೆ ಮಾಡುವುದು ಎಂತು ಸಾಧ್ಯವಿಲ್ಲವೋ ಅಂತೆಯೇ ಧರ್ಮಪ್ರವರ್ತನೆಯನ್ನು ನನ್ನಿಂದ ಬೇರೆ ಮಾಡಿಸಿ ನಾನು ಧರ್ಮಮಾರ್ಗವನ್ನು ತಪ್ಪುವಂತೆ ಮಾಡಲು ಸಾಧ್ಯವಿಲ್ಲ. ತಂತಿಯಿಲ್ಲದೆ ವೀಣೆಯು ನುಡಿಯಲಾರದು. ಚಕ್ರದ ಅವಲಂಬನವಿಲ್ಲದೆ ರಥವು ಇರಲಾರದು. ಇದನ್ನು ಕೇಳಿದ ಕೌಸಲ್ಯೆಯು ದುಃಖ ಹರ್ಷಿತಳಾಗುತ್ತಾಳೆ. ಸೀತೆಯು ವಯಸ್ಸಿನಲ್ಲಿ ಕಿರಿಯಳಾದರೂ ವಿವೇಕದಲ್ಲಿ ಹಿರಿಯಳು ಎಂಬುದನ್ನು ಮನಗಂಡ ಕೌಸಲ್ಯೆಗೆ ಸೀತೆಯಲ್ಲಿ ಅತೀವ ಪ್ರೀತಿಯು. ಕಾಡಿಗೆ ಸೀತೆ ಹೊರಡುತ್ತಾಳೆ. ರಾಮನು ಚಿತ್ರಕೂಟವನ್ನು ಕಂಡು ಹಿಗ್ಗುತ್ತಾನೆ. "ಸೀತಾ ! ನಿನ್ನನ್ನು ನೋಡಿದರೆ ಉಂಟಾಗುವ ಸಂತೋಷಕ್ಕಿಂತಲೂ ಹೆಚ್ಚಿನ ಸಂತೋಷವು ಈ ಚಿತ್ರಕೂಟ ಗಿರಿಯನ್ನು ನೋಡಿದುದರಿಂದ ಉಂಟಾಯಿತು" ಎಂದು ರಾಮನು ಅನುಚಿತವಾದ ಮಾತನ್ನು ಆಡಿದರೂ ತನ್ನ ಸಹಜ ಸ್ವಭಾವವಾದ ಸಾತ್ವಿಕತೆಯನ್ನು ಸೀತೆಯು ಸಡಿಲಿಸದೆ ಇರುವುದು ಗೊತ್ತಾಗುತ್ತದೆ. ಮಹಾಭಾಗ ಎಂಬ ಕವಿವಾಣಿಯು ಸೀತೆಯ ಸಾತ್ವಿಕತೆಯ ಕುರುಹಾಗಿರುತ್ತದೆ. ಸೀತೆಯು ಸ್ವಯಂಧೀರೆ ; ವೀರನಾದ ಪತಿಯನ್ನೇ ಬಯಸಿದ ವೀರಸತಿ ಸೀತೆ. ನಿನ್ನ ಮುಂದೆ ನಾನು ನಡೆದು ದಾರಿಯ ಮುಳ್ಳುಗಿಡಗಳನ್ನು ಕಿತ್ತು ನಿನಗೆ ಅನುಕೂಲವಾದ ಹಾದಿಯನ್ನು ಮಾಡಿಕೊಡುತ್ತೇನೆ ಎಂದು ಗಂಡನ ಶಂಕೆಯನ್ನು ಪರಿಹರಿಸಿದ ಹೆಂಡತಿ ಸೀತೆಯ ಧೈರ್ಯ ಅಚಲವಾದುದು. ರಾಮ ಲಕ್ಷ್ಮಣರ ಮಧ್ಯೆ ಸೀತೆಯಿರಲಿ ಎಂದು ಹೇಳಿದ ದಶರಥನಿಗೆ ಸೀತೆಯ ಯೋಗಕ್ಷೇಮದ ಮಹದಭಿಮಾನವಿರುವುದು : ಗೊತ್ತಾಗುತ್ತದೆ. ಕೈಕೆಯು ಬಯಸಿದುದು ರಾಮನ ವನವಾಸವಲ್ಲವು ; ಸೀತಾ ವನವಾಸವು ಎಂಬ ನುಡಿಗಳು ಸೀತೆಯಲ್ಲಿನ ಪ್ರೇಮದ ಕುರುಹು.

ಅರಮನೆಯಲ್ಲಿ ಇದ್ದುದಕ್ಕಿಂತಲೂ ಹೆಚ್ಚಾಗಿ ಅರಣ್ಯದಲ್ಲಿ ಅನವರತವೂ ಗಂಡನೊಡನೆ ಸೀತೆಯಿದ್ದು ಆತನಿಗೆ ದುಃಖವೂ ಸಂಕಟವೂ ಒದಗದಂತೆ ಪ್ರಿಯಳೂ ಹಿತಕಾರಿಯೂ ಆಗಿ ಜೀವನ ಸಾಗಿಸುತ್ತಾಳೆ. ಸುವರ್ಣ ಮೃಗವನ್ನು ಕಂಡ ಸೀತೆಗೆ ಸ್ತ್ರೀ ಸಹಜ ಸ್ವಭಾವವು ತಗುಲಿ ಅದರ ಮೇಲೆ ಆಸೆಯಾಗುತ್ತದೆ. ಅದು ತನಗೆ ಬೇಕೆಂದು ಹಠ ಹಿಡಿಯುತ್ತಾಳೆ. ರಾಕ್ಷಸರ ಮಾಯೆಯನ್ನು ಕುರಿತು ವಿವರಣೆ ಕೊಟ್ಟು ಅದರ ತಂಟೆ ಬೇಡ ಎಂದು ರಾಮನು ಹೇಳಿದರೂ ಅದಕ್ಕೆ ಒಪ್ಪದೆ ತನ್ನದೇ ದಾರಿಯನ್ನು ಹಿಡಿಯುತ್ತಾಳೆ. ಅದಕ್ಕೆ ಅನುಗುಣವಾದ ಶಿಕ್ಷೆಯನ್ನು ಮುಂದೆ ಅನುಭವಿಸುತ್ತಾಳೆ. ರಾಮಬಾಣದಿಂದ ಆಹತನಾದ ಸುವರ್ಣಮೃಗ ರೂಪದ ಮಾರೀಚನು 'ಹಾ ಲಕ್ಷ್ಮಣಾ ! ಹಾ ಸೀತೆ !' ಎಂದು ಕೂಗಿ ಮೃತನಾಗುತ್ತಾನೆ. ಆ ಆರ್ತಸ್ವರವನ್ನು ಕೇಳಿದ ಸೀತೆಯು ರಾಮನು ಆಪತ್ತಿಗೆ ಸಿಕ್ಕಿದನೆಂದು ಭ್ರಮಿಸಿ ದುಃಖಿಸುತ್ತಾಳೆ. ಅಣ್ಣನ ಸಹಾಯಕ್ಕೆ ಹೋಗುವಂತೆ ಲಕ್ಷ್ಮಣನಿಗೆ ಆಜ್ಞಾಪಿಸುತ್ತಾಳೆ. ಅಣ್ಣನ ಆಣತಿಗೆ ಒಳಗಾಗಿದ್ದ ಲಕ್ಷ್ಮಣನು ಆ ಜಾಗವನ್ನು ಬಿಟ್ಟು

ಹೋಗಲು ಇಷ್ಟಪಡಲಿಲ್ಲ. ತನ್ನ ಕರ್ತವ್ಯದ ದೃಷ್ಟಿಯಿಂದ ನುಡಿದ ಮೈದುನನಿಗೆ "ಅನಾರ್ಯ ಕರುಣಾರಂಭ ನೃಶಂಸ" ಎಂದು ಮೊದಲಾದ ಮಾತಿನಿಂದ ಸೀತೆಯು ಹೊಡೆಯುತ್ತಾಳೆ. ಸಮಯ ಬಂದಾಗ ಬಿರುನುಡಿಗಳನ್ನು ಆಡಬಲ್ಲವಳು ಸೀತೆಯು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ತನ್ನ ಪ್ರಿಯನ ಸಲುವಾಗಿ ಆಕೆಯು ಎಣಿಸಬಾರದ ಯೋಚನೆಗೆ ನಾಲಗೆಯಲ್ಲಿ ನುಡಿಯನ್ನು ನೀಡಿದಳು. ಪ್ರಿಯ ವಸ್ತುವಿಗಾಗಿ ಹೆಂಗಸು ಹೀಗೆ ವರ್ತಿಸುವುದು ಸಹಜ. ಈ ಬಗೆಯ ಜೀವನ ಚಿತ್ರವನ್ನು ಕವಿಯು ಹತ್ತಾರು ಕಡೆ ಕೊಟ್ಟಿದ್ದಾನೆ. ನಿರ್ವಾಹವಿಲ್ಲದೆ ಆಶ್ರುಮುದಿಂದ ಲಕ್ಷ್ಮಣನು ಹೊರಡುತ್ತಾನೆ. ಮೈದುನನ ಹೃದಯವು ಗೊತ್ತಿದ್ದರೂ ಸನ್ನಿವೇಶ, ಮನಸ್ಸಿನ ಕಳವಳವು ಸೀತೆಯ ಬಾಯಿಯಿಂದ ಕಠಿಣವಾದ ಮಾತುಗಳನ್ನು ಆಡಿಸಿತು.

ಅನಂತರ ಸನ್ಯಾಸಿ ವೇಷದ ರಾವಣನು ಸೀತೆಯಲ್ಲಿಗೆ ಬರುತ್ತಾನೆ; ಆಕೆಯನ್ನು ಅಪಹರಿಸುತ್ತಾನೆ. ಕೊಡುವ ಸಾಮ್ಯದಿಂದ ವಿಷಯವು ಮಂಗಳವೋ ಅಮಂಗಳವೋ ಎಂಬ ಅಂಶಗಳು ಧ್ವನಿರೂಪದಲ್ಲಿ ಗೊತ್ತಾಗುವಂತೆ ಬಹಳ ಎಚ್ಚರಿಕೆಯಿಂದ ಆಳವಾದ ಆಲೋಚನೆಗಳಿಂದ ಕವಿ ಸಾಮ್ಯಗಳನ್ನು ಕೊಡುತ್ತಾನೆ. ಸೀತಾದೇವಿಯನ್ನು ರಾವಣನು ಎತ್ತಿಕೊಂಡು ಹೋಗುವಾಗ ಆಕೆಯ ಪೀತಾಂಬರದ ಸೆರಗು ಗಾಳಿಯಲ್ಲಿ ಹಾರುತ್ತಿತ್ತು. ಆಗ ರಾವಣನು ಕಾಡುಗಿಚ್ಚು ಹತ್ತಿಕೊಂಡು ಉರಿಯುತ್ತಿರುವ ಪರ್ವತದಂತೆ ಕಂಡನು. ರಾವಣನು ಸೀತೆಯನ್ನು ಕದ್ದು ತೆಗೆದುಕೊಂಡು ಹೋಗುತ್ತಿರುವಾಗ ವನದ ಸಕಲಸತ್ವಗಳಿಗೂ ಗೋಳಿಟ್ಟ ಬಗೆಯು ಹೆಣ್ಣಿನ ರೀತಿಯದು ರಾವಣನಿಗೆ ಸೀತೆಯು ಹೇಳುವ ಎಲ್ಲ ಮಾತೂ ಸ್ತ್ರೀ ಸ್ವಭಾವಕ್ಕೆ ಸಹಜವಾಗಿದೆ. ಸೀತಾದೇವಿಯನ್ನು ರಾವಣನು ಆಕಾಶದಲ್ಲಿ ಒಯ್ಯುತ್ತಿದ್ದನೆಂದು ಹೇಳುತ್ತಾ ಸೀತೆಯ ಕೊರಳಿನ ಮುಕ್ತಾಹಾರವು ಕೆಳಗೆ ಬೀಳುತ್ತಿದ್ದುದನ್ನು ಗಗನದಿಂದಿಳಿಯುವ ಗಂಗೆಯಂತಿದ್ದಿತು ಎಂದು ಕವಿಯು ಅಲಂಕಾರಿಕವಾಗಿ ಹೇಳುತ್ತಾನೆ. ಲಂಕಾ ನಗರದಲ್ಲಿ ಅಶೋಕ ವನದಲ್ಲಿ ಸೀತೆಯನ್ನು ರಾಕ್ಷಸಿಯರ ಕಾವಲಿನಲ್ಲಿರಿಸುತ್ತಾನೆ. ತನ್ನನ್ನು ಕಾಡಲು ಬಂದ ರಾವಣನನ್ನು ಹುಲ್ಲು ಕಡ್ಡಿಗಿಂತ ಹೀನಾಯವಾಗಿ ಭಾವಿಸಿ ಗರ್ಜಿಸುತ್ತಾಳೆ. ನಿನಗೂ ನಿನ್ನ ದೆಸೆಯಿಂದ ಇತರ ರಾಕ್ಷಸರಿಗೂ ವಿನಾಶಕಾಲವು ಪ್ರಾಪ್ತವಾಗಿದೆ ಎಂದುದಲ್ಲದೆ ರಾವಣನನ್ನು ರಾಕ್ಷಸಾಧಮ ಎಂದು ಸಂಬೋಧಿಸುತ್ತಾನೆ. ಆತ್ಮಬಲದ ಮುಂದೆ ರಾಕ್ಷಸೀಯ ಬಲವು ಕೇವಲ ತೃಣ. ಉಪಮೆಗಳ ಮೂಲಕ ಆಕೆಯ ಸತೀತ್ವದ ಪ್ರಭೆಯನ್ನು ಕವಿಯು ತೋರಿಸುತ್ತಾನೆ. ಆ ಒಂದೊಂದು ಉಪಮೆಯು ಪ್ರತ್ಯಕ್ಷ ಅನುಭವವನ್ನು ಕೊಡುತ್ತದೆ. ನಷ್ಟವಾದ ಮಹಾ ಕೀರ್ತಿಯಂತೆ, ಅಪಮಾನಿತವಾದ ಶ್ರದ್ಧೆಯಂತೆ, ಕ್ಷೀಣವಾದ ಪ್ರಜ್ಞೆಯಂತೆ,ವಿಫಲಗೊಂಡ ಆಸೆಯಂತೆ, ತಿರಸ್ಕೃತವಾದ ಆಜ್ಞೆಯಂತೆ, ವಿನಾಶಗೊಳಿಸಲಾದ ಪೂಜೆಯಂತೆ, ಗ್ರಹಣ ಹಿಡಿದ ಚಂದ್ರಮಂಡಲವುಳ್ಳ ಹುಣ್ಣಿಮೆ ರಾತ್ರಿಯಂತೆ ಸೀತೆಯಿದ್ದಳು—ಇದು ಅಶೋಕ ವನದ ಸೀತೆಯ ಚಿತ್ರ. ಹನುಮಂತನು ಸೀತೆಯಲ್ಲಿಗೆ ಬರುತ್ತಾನೆ; ರಾಮದೂತನು ಎಂದು ತಿಳಿಸುತ್ತಾನೆ. ಆಗ ರಾಮಲಕ್ಷ್ಮಣರ ಆರೋಗ್ಯಾದಿ ವಿಚಾರವನ್ನು ಕೇಳಿ, ರಾಮನಿಗೆ ತನ್ನ ವಿಚಾರದಲ್ಲಿ ಪ್ರೀತಿ ಎಷ್ಟೆಂಬುದನ್ನು ತಿಳಿದುಕೊಂಡು, ಆತನು ತನ್ನನ್ನು ಬಿಡಿಸಿಕೊಳ್ಳಲು ಬೇಗನೆ ಬರುವಂತೆ ಮಾಡು ಎಂದು ಬೇಡಿ, ರಾಮನ ಈ ಕಷ್ಟವು ಎಂದಿಗೆ ಮುಗಿಯುವುದೋ ಎಂದು ಹಂಬಲಿಸಿದ ಸೀತೆಯ ಮಾತಿನಲ್ಲಿ ಶ್ರೇಷ್ಠ ಸ್ತ್ರೀತ್ವದ ಸಹಜ ಸರಳತೆಯು ಎದ್ದು ಕಾಣುತ್ತದೆ. ಸೀತೆಯ ದುಃಖ ಹಾಗೂ ಹರ್ಷದ ಚಿತ್ರವನ್ನು ಎರಡು ಸಂಗತಿಗಳಿಂದ ಅಲಂಕಾರಿಕವಾಗಿ ಕವಿಯು ನಿದರ್ಶಿಸಿದ್ದಾನೆ. ಅಶೋಕ ವನದಲ್ಲಿ ದುಃಖಿಸುತ್ತಿದ್ದ ಸೀತೆಯು ಹನುಮಂತನನ್ನು ಕಂಡ ರೀತಿಯಿಂತಿದೆ.

> ಹಿಮಹತನಳಿನೀ ವನಷ್ಟ ಶೋಬಾ।
> ವ್ಯಸನ ಪರಂಪರಯಾನ ಪೀಡ್ಯಮಾನಾ।
> ಸಹಚರ ರಹಿತೇವ ಚಕ್ರವಾಕೀ।
> ಜನಕಸುತಾ ಕೃಪಣಾಂ ದಶಾಂ ಪ್ರಪನ್ನಾ॥

—ಹಿಮದಿಂದ ನೊಂದ ತಾವರೆ; ವ್ಯಸನ ಪರಂಪರೆಯಿಂದ ಪೀಡಿತ; ಸಹಚರಿಯನ್ನಗಲಿದ ಚಕ್ರವಾಕವು ಸೀತೆಯು ಈಕೆಯು ದೀನೆ-ಆಂಜನೇಯನಿಂದ ರಾಮವೃತ್ತಾಂತವನ್ನು ಕೇಳಿದ ಸೀತೆಯು ಹರ್ಷಿತಳಾಗುತ್ತಾಳೆ. ಶರತ್ಕಾಲದ ಪ್ರಾರಂಭದಲ್ಲಿ ಮುಕ್ಕಾಲು ಭಾಗ ಮೇಘವು ಮುಚ್ಚಿಕೊಂಡು ಕೊಂಚ ಭಾಗ ಮಾತ್ರ ಹೊರಗೆ ಕಾಣುವ ಚಂದ್ರಬಿಂಬದಿಂದ ಬೆಳಗುವ ರಾತ್ರಿಯಂತೆ ಸೀತೆಯು ಹರ್ಷಗೊಂಡಳೆಂದು ಕವಿಯು ವರ್ಣಿಸಿ

ದ್ದಾನೆ. ಹರ್ಷ ದುಃಖಗಳ ಪರಸ್ಪರ ಸಮ್ಮೇಳನವನ್ನು ಶರತ್ಕಾಲದ ಚಂದ್ರಿಕೆ, ಮೇಘ ರಾತ್ರಿಗಳಿಂದ ಕವಿಯು ತಿಳಿಸಿದ್ದಾನೆ.

ಅಶೋಕ ವನದಲ್ಲಿ ರಾಕ್ಷಸಿಯರ ಕಾವಲಿನಲ್ಲಿ ರಾವಣನಸೆರೆಯಾಳಾಗಿ ಸೀತೆಯು ಕೋಟಲೆಪಡುತ್ತಾಳೆ. ರಾವಣನಿಂದ ಪ್ರಚೋದಿತರಾದ ರಾಕ್ಷಸಿಯರು ಆಕೆ ಯನ್ನು ರಾವಣನ ಮಡದಿಯಾಗುವಂತೆ ಬಲಾತ್ಕರಿಸು ತ್ತಾರೆ. ವ್ಯಾಘ್ರಗಳ ನಡುವಣ ಹರಿಣಿಯಂತೆ ತತ್ತರಿಸಿದ ಸೀತೆ "ರಾಕ್ಷಸ ರಾವಣನನ್ನು ನನ್ನ ಬಲಗಾಲಿನಿಂದಲೂ ನಾನು ಮುಟ್ಟಲಾರೆ. ನಾನು ಆತನನ್ನು ಅಪೇಕ್ಷಿಸಿ ಆತನಿಗೆ ಬಲಿ ಬೀಳುವೆನೇ? ನನ್ನನ್ನು ಕತ್ತರಿಸಿದರೂ, ಸೀಳಿದರೂ, ಉರಿಯುವ ಅಗ್ನಿಗೊಪ್ಪಿಸಿದರೂ ನಾನು ಮಾತ್ರ ರಾವಣನ ಸಮೀಪ ಸೇರಲು ಸಮ್ಮತಿಸುವುದಿಲ್ಲ. ನೀವು ಗಳಹುವುದರಿಂದ ಏನು ಫಲ?" ಎನ್ನುತ್ತಾಳೆ. ದುಃಖ ಸಂತಪ್ತಳಾಗಿ ರಾಮಲಕ್ಷ್ಮಣರನ್ನೂ, ಕೌಸಲ್ಯಾ ಸುಮಿತ್ರೆಯರನ್ನೂ ನೆನೆದುಕೊಂಡು ಗೋಳಿಡುವ ವರ್ಣನೆಯು ಓದುಗರಲ್ಲಿ ಕಂಬನಿಯ ಕೊಳವನ್ನು ನಿರ್ಮಿಸುತ್ತದೆ. ಸೀತೆಯ ಮುಂದೆ ರಾಮನ ಮಾಯಾ ಶಿರಸ್ಸನ್ನು ರಾವಣನು ಬಿಸಾಡಲು ಕಡಿದ ಬಾಳೆಯಗಿಡ ದಂತೆ ಕೆಳಗೆ ಬಿದ್ದು ಮೂರ್ಛಿತಳಾಗುತ್ತಾಳೆ. ಪ್ರಜ್ಞೆ ಬಂದನಂತರ ತನ್ನ ಕನಸುಗಳು ಕಳಚಿ ಹೋದವೆಂದೂ, ಎಳೆಗರುವನ್ನು ಕಳೆದುಕೊಂಡ ಹಸುವಿನ ಗತಿಯು ಕೌಸಲ್ಯೆಗೆ ಆಯಿತೆಂದೂ, ರಾಮವಿನಾಶಕ್ಕೆ ತಾನೇ ಕಾರಣಳಾದಳೆಂದೂ ಬಗೆ ಬಗೆಯಾಗಿ ಪ್ರಲಾಪಿಸುತ್ತಾಳೆ. ವಾಚಕರ ಹೃದಯವು ಕರಗಿ ನೀರಾಗುತ್ತದೆ. ರಾಮನ ಶರೀರದ ಮೇಲೆ ತನ್ನ ಶರೀರವನು ಹಾಕಿ ಸುಡಬೇಕೆಂದು ರಾವಣನನ್ನು ಕೋರುತ್ತಾಳೆ. ಅಲ್ಲಿಂದ ರಾವಣನು ಹೊರಟನಂತರ ನಿಜಸ್ಥಿತಿಯು ಸೀತೆಗೆ ತಿಳಿಯುತ್ತದೆ. ನಾಗಪಾಶ ಬಂಧಿತರಾಗಿ ಮರಣ ಮುಖದಲ್ಲಿರುವ ರಾಮ ಲಕ್ಷ್ಮಣರನ್ನು ಕಂಡಾಗ ಶೋಕಿಸುವ ನುಡಿಗಳು ಸೀತೆಯ ಲೋಕೋತ್ತರ ಸ್ವಭಾವವನ್ನು ಚೆನ್ನಾಗಿ ವ್ಯಕ್ತಗೊಳಿಸುತ್ತವೆ.

ರಾವಣವಧೆಯು ಮುಗಿಯುತ್ತದೆ. ಹನುಮಂತನ ಮೂಲಕ ರಾಮನ ಸಂದೇಶವನ್ನು ಕೇಳಿದ ಸೀತೆಯು ಪ್ರಹರ್ಷ ಪರವಶೆಯಾಗಿ ಕೊಂಚಕಾಲ ಮಾತನಾಡ ಲಾರದೆ ಮೌನತಾಳುತ್ತಾಳೆ. ವಿಭೀಷಣನ ಸಲಹೆ ಯಂತೆ ಆತನ ಹೆಂಡತಿ ಸರಮೆಯು ಸೀತೆಗೆ ಅಭ್ಯಂಜನ ಮಾಡಿಸಿ ಅಲಂಕರಿಸುತ್ತಾಳೆ. ಸರ್ವಾಲಂಕಾರ ಭೂಷಿತೆ ಯಾಗಿ ಹಿಗ್ಗುತ್ತ ಬಂದ ಸೀತೆಯನ್ನು ಕಂಡ ರಾಮನಿಗೆ ಸಂತೋಷವಾಗಲಿಲ್ಲ; ಸತಿಯನ್ನುಕುರಿತು ಹೇಳುತ್ತಾನೆ.

ರಾವಣಾಂಕೇಪರಿಭ್ರಷ್ಟಾಂ।
ದುಷ್ಟಾಂ ದುಷ್ಟೇನಚಕ್ಷುಷಾ।
ಕಥಂ ತ್ವಾಂ ಪುನರಾದದ್ಯಾಂ।
ಕುಲಂ ವ್ಯಪದಿಶನ್ ಮಹತ್॥

ರಾವಣನು ಸೀತೆಯನ್ನು ಕೆಟ್ಟ ದೃಷ್ಟಿಯಲ್ಲಿ ನೋಡಿರು ವುದು ನಿಜವಾದರೂ ಈ ಸಮಯದಲ್ಲಿ ಸೀತೆಯನ್ನು ರಾವಣನ ತೊಡೆಯಲ್ಲಿ (ಬಲಾತ್ಕಾರದಿಂದ) ಕುಳಿತ ಕಾರಣ ಪರಿಭ್ರಷ್ಟಳೆಂದು ಕರೆದಿರುವ ಶ್ರೀರಾಮನಲ್ಲಿ ಸಹಾನುಭೂತಿಯು ಉಂಟಾಗದೆ ಸೀತೆಯತ್ತ ವಾಚಕರ ಅನುಕಂಪನವು ಉಂಟಾಗುತ್ತದೆ ಆಗ ಸೀತೆಯ ಹರ್ಷದಲ್ಲಿಯೂ ಭಿನ್ನಭಿನ್ನವಾಗುತ್ತದೆ. ಸೀತೆಯು ಉತ್ತರಿಸುತ್ತಾಳೆ:

ಯದ್ಯಹಂ ನಾತ್ರ ಸಸ್ಪರ್ಶ।
ಗತಾಸ್ಮಿ ವಿವಶಾ ಪ್ರಭೋ।
ಕಾಮ ಕಾರೋ ನಮೇ ತತ್ರ।
ದೈವಂ ತತ್ರಾಪರಾಧತಿ॥

—ಪ್ರಭು, ಒಂದು ವೇಳೆ ನಾನು ರಾವಣನ ಶರೀರ ಸ್ಪರ್ಶಳಾಗಿದ್ದರೆ ಅದು ನನ್ನ ದೋಷವಲ್ಲ. ಅದರಲ್ಲಿ ಯಾವ ರೀತಿಯಿಂದಲೂ ನಾನು ಕಾಮವಿಕಾರ ಪಡೆದಿರ ಲಿಲ್ಲ. ಆ ವಿಚಾರದಲ್ಲಿ ದೈವವೇ ಹೊಣೆಯಾಗಬಹುದೇ ಹೊರತು ನಾನು ದೋಷಿಯಾಗಲಾರೆ ಸೀತೆಯ ಈ ನುಡಿಯಲ್ಲಿ ಯಾವ ದೋಷವೂ ಕಾಣದು. ಪರಾಧೀ ನೇಷು ಗಾತ್ರೇಷು ಕಿಂಕರಿಷ್ಯಾಮಿ ಅನೀಶ್ವರಾ ಎನ್ನುವ ಆಕೆಯ ಮಾತು ಯಾರನ್ನು ತಾನೇ ಸಾದ್ರಾಂತಃಕರಣ ರನ್ನಾಗಿ ಮಾಡಲಾರದು! ಸಾಮಾನ್ಯರಿಗೆ ಈ ಶಂಕೆಯು ಬರುವುದು ಸಹಜ. ಆದರೂ ಅಂತಹವನು ಹೆಂಡತಿಯ ಮಾನವನ್ನು ಕಾಪಾಡಲು ಯತ್ನಿಸುತ್ತಾನೆ. ಇಲ್ಲಿ ಶ್ರೀರಾಮನು ನರಶಾರ್ದೂಲನಾಗಿ ಶಂಕಿಸಬಹುದೇ? "ನಿನಗೆ ಸತ್ಯಾಂಶ ಗೊತ್ತಿದೆ. ನನ್ನ ಜೀವನ ನಿಷ್ಠೆಯಲ್ಲಿ ಎಂದೆಂದೂ ಶಂಕಿಸದೆ ಏಕಪತ್ನೀವ್ರತಸ್ಥನಾದ ನೀನೂ

ಸಹ ಸಾಮಾನ್ಯನಂತೆ ಸಂದೇಹಪಡಬಹುದೇ ?" ಎಂದು ಸೀತೆಯು ರಾಮನನ್ನು ಕೇಳುತ್ತಾಳೆ. ಎಲ್ಲವೂ ಅರಣ್ಯ ರೋದನವಾಗುತ್ತದೆ. ಸೀತೆಯು ಅಗ್ನಿಪ್ರವೇಶ ಮಾಡಿ ಜಯಶಾಲಿಯಾಗುತ್ತಾಳೆ. ಅನಂತರ ಗಂಡನ ತೊಡೆಯ ಮೇಲೇರಿ ಲೋಕವನ್ನು ಧೈರ್ಯದಿಂದ ನೋಡುತ್ತಾಳೆ. ಚಿರದುಃಖಿನಿಯಾದ ಸೀತೆಯು ದುಃಖಸೇತುವೆಯಲ್ಲಿಯೇ ಹಾಯುವಂತಾಗುತ್ತಾಳೆ. ಅಗಸನ ಮಾತಿನಿಂದ ತುಂಬಿದ ಗರ್ಭಿಣಿ ಸೀತೆಯನ್ನು ರಾಮನು ವ್ಯಾಜಾಂತರದಿಂದ ಕಾಡಿಗೆ ಕಳುಹಿಸುತ್ತಾನೆ. ಕೊನೆಗೆ ಪೃಥ್ವೀದೇವಿಯು ಕರೆದುಕೊಂಡು ಹೋಗುವ ರುದ್ರರಮಣೀಯ ಅಂತಿಮ ಪರಿಣಾಮ. ಪಾಮನ ಚರಿತಳಾದ ಸೀತೆಯ ಪಾತ್ರ ಪರಿಪೋಷಣವು ಸರ್ವೋತ್ತಮವಾಗಿದೆ. ಭಾರತೀಯ ಸಂಸ್ಕೃತಿಯ ಅಮೃತ ಫಲವೊಂದಾಗಿ ಸೀತೆಯು ಪರಿಣಮಿಸಿದ್ದಾಳೆ.

---

- ಯಾವ ಕೆಲಸವನ್ನು ಬಾಯಿ ಮಾಡಲಾರದೋ ಅದನ್ನು ಕಣ್ಣುಗಳು ಮಾಡಿ ತೋರಿಸುತ್ತವೆ ಯಾವ ಕೆಲಸವನ್ನು ಕಣ್ಣು ಮಾಡಲಾರವೊ ಅದನ್ನು ಕಣ್ಣೀರು ಮಾಡಿತೋರಿಸುತ್ತದೆ.
- ಯಾವ ಮನುಷ್ಯನು ಎಂದೂ ನಗುವುದಿಲ್ಲವೊ ಆತ ಭಯಂಕರಕ್ಕಿಂತ ಭಯಂಕರವಾದ ಪಾಪ ಕೃತ್ಯವನ್ನು ಮಾಡಬಲ್ಲ ಎಂದೇ ತಿಳಿಯಬೇಕು.
- ನಿಮ್ಮಲ್ಲಿ ಎಳ್ಳುಕಾಳಿನಷ್ಟು ಆತ್ಮ ವಿಶ್ವಾಸವಿದ್ದರೂ ಸಾಕು–ನಿಮಗೆ ಯಾವ ಕಾರ್ಯವೂ ಅಸಂಭವವಲ್ಲ
- ನನ್ನ ಹೃದಯದಲ್ಲಿ ನಿನ್ನ ನೋವಿರುವುದೇ ಸಹಾನುಭೂತಿ.
- ಬೇರೆಯವರು ತಲೆ ಕೆಡಿಸಿಕೊಂಡಾಗ ನೀನು ಶಾಂತವಾಗಿರುವುದೇ ನಿನ್ನನ್ನು ಆ ಗುಂಪಿನಲ್ಲಿ ಉತ್ತಮ ಮನುಷ್ಯನನ್ನಾಗಿ ಮಾಡುತ್ತದೆ.

ಸಂಗ್ರಹ : **ವೀಣಾಪ್ರಿಯ**

## ಭೂಮಂಡಲ ಹರಾಜಾಯಿತು !

ಭೂಮಂಡಲ ಹರಾಜಾಯಿತೆಂದರೆ ಆಶ್ಚರ್ಯಪಡಬೇಕಾದುದೇ ಸರಿ. ಆದರೆ ಹರಾಜಾದುದು ದಿಟ ! ಕ್ರಿ. ಶ. 193ರಲ್ಲಿ ಟಿಡಿಯಸ್ ಸಲ್ವಿಯಸ್ ಜಾಲಿಯಾನಸ್ ಮಾರ್ಕಸ್ ಎಂಬಾತ ಸುಮಾರು ಎರಡು ಕೋಟಿ ರೂಪಾಯಿಗೆ ಭೂಲೋಕವನ್ನು ಕೊಂಡನು. ರೋಮಿನ ಶಾಸನಸಭೆ ಭೂಮಂಡಲವನ್ನು ಹರಾಜು ಮಾಡಲು ಅನುಮತಿ ನೀಡಿತು.

ಆದರೆ ಆ ಶ್ರೀಮಂತ ಅಷ್ಟು ಹಣ ತೆತ್ತರೂ ಜಗತ್ತನ್ನು ಆಳಿದನೆ ? ಇಲ್ಲ. ಅನ್ಯ ದೇಶದವರು ಈ ಮಾರಾಟವನ್ನು ಒಪ್ಪಲಿಲ್ಲ. ಸೆಪ್ಟಿಯಸ್ ಸೇವಸ್ ಎಂಬುವನ ಮುಖಂಡತನದಲ್ಲಿ ಉದ್ರಿಕ್ತ ಜನರು ಆ ಭೂಮಂಡಲ ದೊಡೆಯನನ್ನು ಬಡಿದು ನೆಲಕ್ಕುರುಳಿಸಿದರು. ಹರಾಜು ನಡೆದ ಮೂರೇ ತಿಂಗಳಲ್ಲಿ ಆತ ಇಹಲೋಕ ತ್ಯಜಿಸಿದ.

# ಸಮಸ್ಯೆ






**ಶ್ರೀಮತಿ ಸುಲೋಚನಾ ನಾಗರಾಜ್**
ಬೆಂಗಳೂರು

ಇಂದಿನ ನಾಗರಿಕ ಕಾಲದಲ್ಲಿ ನಾನಾಮುಖ ವೈವಿಧ್ಯಮಯ ಸಮಸ್ಯೆಗಳ ಉದ್ಭವ ಬಗೆಹರಿಯದ ಸಮಸ್ಯೆ. ಇದು ಯಾರಿಗೂ ಹೊರತಲ್ಲ. ಎಲ್ಲಾ ಹೇಳುವ ಮೊದಲಿಗೆ ನನಗೇ ತಲೆ ತಿನ್ನುತ್ತಿದೆ ಸಮಸ್ಯೆ. ಮಿಕ್ಕೆಲ್ಲಾ ವಿಚಾರ ಬಿಟ್ಟು ಈ ಸಮಸ್ಯಾ ಪ್ರಶ್ನೆಯೇ ನಿನ್ನ ತಲೆಯಿಂದ ಏಕೆ ಹೊರಬಂತು ಎಂದು. ಹುಂ ! ಇದು ಬಿಡಿಸಲಾಗದ ಸಮಸ್ಯೆ. ಅವರವರ ಯೋಗ್ಯತೆಗೆ ಅವರವರ ಅಂತಸ್ತಿಗೆ ಹಾಗೂ ವಾತಾವರಣಕ್ಕೆ ಅನುವಾಗಿ ಅವರವರಿಗದು ನಿಲುಕದ ಗೂಢವೇ....

ಕೆಲವು ಮಂದಿ ಶ್ರೀಮಂತರಿಗೆ ತಿಂದದ್ದು ಹೇಗೆ ಜೀರ್ಣಿಸಿಯೇನು, ಮನೆಮಾರು ತುಂಬಿದ ಗಳಿಕೆಯನ್ನು ಹೇಗೆ ವ್ಯಯಿಸಿಯೇನು, ಕಾಲ ಹೇಗೆ ನೂಕಿಯೇನೆಂಬುದೇ ಸಮಸ್ಯೆಯಾದರೆ, ಬಡವರಿಗೆ ದಿನನಿತ್ಯದ ಅನ್ನ ಬಟ್ಟೆಯ ಪೂರೈಕೆಯ, ಭಗವಂತಾ ಬೇಗ ಬೇಗ ದಿನ ಸರಿಯಬಾರದೇ ಎಂಬುದೇ ಕೊರಗು. ಮನೆಯ ಯಜಮಾನನ ಹೆಂಡತಿ ಮಕ್ಕಳ ಹೊಟ್ಟೆ ಬಟ್ಟೆ ಪೂರೈಸಲಾಗದ ಗಳಿಕೆಯ ಅಭಾವದಿಂದ ಮನೆಯ ಗೃಹದೇವತೆಯಾಗಿ ಬೆಳಗಬೇಕಾದ ಹೆಣ್ಣು. ಕೋಮಲೆಯಾದ ಹೆಣ್ಣು ತಾನೂ ಹೊರಗೆ ಗಂಡಸಿನಂತೆ ದುಡಿದು ಮನೆ, ಮಕ್ಕಳ ಹೊಟ್ಟೆ ಬಟ್ಟೆಯ ಕೊರತೆಯನ್ನು ತುಂಬುವ ಸಮಸ್ಯೆ ಒಂದಾದರೆ, ಗಂಡಸಿನಂತೆ ತಾನೂ ಹೊರಗೆ ನಿಂತರೆ ಮಾತೆಯಾಗಿ ಮಕ್ಕಳ ಲಾಲನೆ ಪಾಲನೆಗೆ ಎರವಾಗುವೆನೇ ಎಂಬ ಸಮಸ್ಯೆ ಒಂದೆಡೆ.

ಅದರಲ್ಲೂ ಇಂದಿನ ಮುಂದುವರಿದ, ಮುಂದುವರಿಯುತ್ತಿರುವ ಸಮಾಜದಲ್ಲಿ ಮಧ್ಯಮವರ್ಗದ ಹೆಣ್ಣಿನ ಸಮಸ್ಯೆ ಅತ್ಯಂತ ಜಟಿಲವಾದುದು, ಆಳವಾದುದು. ವಿದ್ಯೆಗೆ ತಕ್ಕ ವಿನಯಕ್ಕೆ ಬದಲಾಗಿ ಅಹಂಭಾವವನ್ನೇ ಮೈಗೂಡಿಸಿಕೊಂಡು ಆಕಾಶದಲ್ಲೇ ಹಾರಾಡುತ್ತಿರುವ ಸುಸಂಸ್ಕೃತ (?) ತರುಣರ ಅಭಾವದಿಂದಾಗಿ ಉಳಿದೇ ಉಳಿದ ಕನ್ಯೆಯರ ಸಮಸ್ಯೆ ಬಹುತೇಕ ಎಲ್ಲರ ಮನೆ ಮಾತಾದರೆ, ಮದುವೆಯಾಗಿ, ಕಟ್ಟಿದ ಆಶಾಗೋಪುರ ಬುಡಸಮೇತ ಕುಸಿದು, ನಿರಾಶರಾಗಿ ಏರುಪೇರಾದ ಜೀವನದೊಂದಿಗೆ ಹೆಣಗಾಡುತ್ತಾ ನಡೆಯುವವರದೊಂದು ಸಮಸ್ಯೆ. ಬುದ್ಧಿ ಬಲಿಯುವ ಮೊದಲೇ ಮದುವೆ ಎಂದರೇನು ? ಯಾಕಾಗಿ ? ಅದರ ಜವಾಬ್ದಾರಿಯೇ

ನೆಂದರಿಯುವ ಮುನ್ನವೇ ಸಂಪ್ರದಾಯಕ್ಕೆ ಕಟ್ಟುಬಿದ್ದು, ಹಿರಿಯರ ಆಣತಿಗೆ ತಲೆಬಾಗಿ ಆಧುನಿಕತೆಯ ಸೋಂಕನ್ನೂ ತಾಕಿಸಿಕೊಳ್ಳದ ಗೃಹಿಣಿಯರಾದ ನಮ್ಮ ತಾಯಂದಿರ ಸಮಸ್ಯೆಯೇನು ಅಲ್ಪವೇ? ಗುರುಹಿರಿಯರ ಸೇವೆಗೈದು ತಾನು, ತನ್ನದೆಂಬುದನ್ನರಿಯದೆ ಬಾಳಿ ಬದುಕಿ, ಮುತ್ತೈದೆಯರಾಗಿ, ಅಷ್ಟಪುತ್ರ—ಪುತ್ರೀ ಸೌಭಾಗ್ಯವತಿಯರಾಗಿ ಬದುಕುತ್ತಿರುವ ನನ್ನ ಮಾತೆಯರ ಜೀವಕ್ಕೇನು ನೆಮ್ಮದಿಯೇ ? ಸಮಾಜದ ಮಧ್ಯೆ ತಮ್ಮ ದುಃಖ, ದಾರಿದ್ರ್ಯವನ್ನು ತೋರ್ಪಡಿಸಿಕೊಳ್ಳಲಾರದ ಅಭಿಮಾನ, ಮರ್ಯಾದೆ ಒಂದೆಡೆ ಕಾಡಿದರೆ, ದಿನ ಕಳೆಯುವುದೇ ದುಸ್ಸಾಧ್ಯವಾಗುತ್ತದೆ. ತಮ್ಮೆಲ್ಲಾ ಬರಿದೇ ಎನಿಸುವ ಸ್ವಾಭಿಮಾನ ಬಿಡದೆ. ಬಡತನ ಮನುಷ್ಯತ್ವವನ್ನೇ ಹಾಳುಮಾಡಬೇಕೇ ? ಮಕ್ಕಳ ಮುಖ ನೋಡಿ, ಹೆತ್ತ ಹೊಟ್ಟೆಯನ್ನು ಬಗ್ಗಿಸಿಕೊಂಡು ಆಳುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ಹೆರವರೆದುರು ಕೈಚಾಚದೆ, ಬಾಗದೆ ವಿಧಿಯೇ ಇಲ್ಲವಾಗುತ್ತದೆ ಕೆಲವೊಮ್ಮೆ. ಇದೆಂತಹ ದೀನ ಸಮಸ್ಯೆ ?

ಇನ್ನು ಆಧುನಿಕ ತರುಣಿಯರ ನಾನಾಮುಖ ಸಮಸ್ಯೆ ಬಿಡಿಸಲಾಗದ್ದು. ಮದುವೆಯಾಗುವವರೆಗೂ ತಂದೆತಾಯಿಗಳೊಡಗೊಂಡು ತಪಸ್ಸಾಚರಿಸಿದರೆ, ತದನಂತರ ದೊರಕಿದ ಫಲವಾದರೂ ಒಳ್ಳೆಯದೇ, ಸೂಕ್ತವಾದುದೇ ಎಂಬ ಭರವಸ. ನಂಬಿಕೆಯೇನೂ ಇಲ್ಲ. ಗೃಹಿಣಿಯಾಗುವವರೆಗೆ ಚಿಂತಿಸುವ ಚಿಂತೆ ಒಂದೇ ಆಗಿದ್ದರೆ ಗೃಹಿಣಿಯಾದನಂತರ ನಾನಾ ಚಿಂತೆ. ಹಸನಾದ ಬಾಳು ತನ್ನದಾದೀತೇ ಕೊನೆಯವರೆಗೆ, ತುಂಬಿದ ಮನೆಯಾದರೆ ವಾತಾವರಣ ತನಗೆ ಹಿಡಿಸೀತೆ? ಎಲ್ಲರ ಮೈತ್ರಿ, ಸಹಾನುಭೂತಿ, ವಿಶ್ವಾಸ ತನ್ನಮೇಲಿರುವುದೇ, ಯಾವ ಅಮೂಲ್ಯ ಘಳಿಗೆಯಾಗಿ ತಾನು ವಿವಾಹಿತಳಾಗಿ ಪತಿಯ ಕೈಹಿಡಿದೆನೋ, ತನ್ನ ಸಕಲ ಸೌಭಾಗ್ಯವೆನಿಸುವ ಪತಿಯ ಪೂರ್ಣ ಪ್ರೇಮ ವಿಶ್ವಾಸ ತನ್ನ ಮೇಲೆ ನಿರಂತರವಾಗಿರುವುದೋ ಮನೆಗೆ ಮಕ್ಕಳಿಗೆ [illegible]ಯಾಗಿ ತಾನು ಬಾಳಲು ಅನುಕೂಲವಿದ್ದೀತೋ....ಇವೇ ಸಮಸ್ಯೆಗಳು ಮುಖ್ಯವಾಗಿ ಕಾಡುತ್ತವೆ. ಅವಳ ಅರ್ಧ ಆಯುಸ್ಸು ಭಾವನಾಜೀವಿಯಾಗಿ ಹಗಲುಗನಸು ಕಂಡು ಒಳ್ಳೆಯದನ್ನೇ ಕಾಣುವ ಆಸೆಯಲ್ಲಿ ಕಳೆದುಹೋಗಿರುತ್ತದೆ. ಉಳಿದ ಆಯುಸ್ಸುಂದೆಗಟ್ಟಿಮಾಡಿಕೊಂಡು ಸಿದ್ಧವಿರಬೇಕು ಬರಬಹುದಾದ ಚಿಂತೆ, ನಿರಾಶೆ, ದೌರ್ಭಾಗ್ಯಗಳನ್ನೆದುರಿಸಲು ! ತಾನು ಕಂಡ ಕನಸೊಂದಾಗಿದ್ದರೆ ಮುಂಗಾಣುವ ನನಸೇ ತಿರುವು ಮುರುವು. ಅದರಲ್ಲೂ ಸೇರಿದ ಮನೆಯ ಪ್ರತಿನಿಧಿಗಳೆಲ್ಲಾ ಹಠವಾದಿಗಳು ಆದರಂತೂ ಅವಳ ಜೀವನ ಬರಡು ಬರಡೇ ಸ್ವಭಾವತಃ ಧೈರ್ಯಶಾಲಿಯಲ್ಲದಿದ್ದರೆ. ಸಂಕೋಚ, ಲಜ್ಜಾ ಪ್ರವೃತ್ತಿಯವಳಾದರೆ ಮತ್ತೂ ಅವಳ ಬಾಳು ಬೇಸರವೆನಿಸುತ್ತದೆ. ಆಗ ಅಲ್ಲಿ ಪ್ರೀತಿ, ಹೊಂದಾಣಿಕೆ, ವಿಶ್ವಾಸಕ್ಕೆ ಬದಲಾಗಿ ಅಸಮಾಧಾನ, ಸ್ವಾರ್ಥವೇ ತಾಂಡವನಾಡುತ್ತದೆ. ತನ್ನ ಮೂಕ ಸಂಕಟವನ್ನು ಬಗೆಹರಿಸಿಕೊಳ್ಳುವ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುತ್ತದೆ ಯೋಗ್ಯ ಗೃಹಿಣಿಯಾದವಳಿಗೆ.

ಇನ್ನು ಹೆಣ್ಣಾದ ಯಾವಳೂ ಪತಿಪ್ರೇಮದ ಪೂರ್ಣವಿಶ್ವಾಸವನ್ನು ಬಯಸುತ್ತಾಳೆ. ಅದೇ ಅವಳ ಚಿರಂತನ ಆಸ್ತಿ. ಇದಿಲ್ಲದೆ ಅವಳ ಜೀವನ ಪೂರ್ಣವೆನಿಸಲಾರದು. ಇದೊಂದು ಭಾಗ್ಯ ತನ್ನ ಪಾಲಿಗೆ ಎಂದೆಂದಿಗೂ ಇದ್ದಿತೆಂದರೆ ಪ್ರಪಂಚವೇ ಎದುರು ನಿಂತರೂ ಹಿಮ್ಮೆಟ್ಟಿಸಿಯೇನೆಂಬ ನಂಬಿಕೆ, ಸುತ್ತ ಮುತ್ತಲಿನ ಒದಗಿ ಬಂದ ನೋವನ್ನೆಲ್ಲಾ ಮರೆತೇನೆಂಬ ಆತ್ಮವಿಶ್ವಾಸ ಅವಳದಾದೀತು ಆದರೆ ? ಕೆಲವೊಮ್ಮೆ ಮದುವೆಯಾದ ತರುಣದಲ್ಲಿ ಇದ್ದ ಪರಸ್ಪರ ಪ್ರೇಮ ವಿಶ್ವಾಸ ದಿನಗಳೆದಂತೆ ಕ್ಷೀಣಿಸುತ್ತಾ ಹೋಗುತ್ತದೆ.

ಭಾವದೇವಿ ಎಂಬ ಸಂಸ್ಕೃತ ಕವಯಿತ್ರಿ ಇಂತಾದ ಮಹಿಳೆಯೊಬ್ಬಳ ಉದ್ವೇಗವನ್ನು ಕುರಿತು ತಾನೇ ಅನುಭವಿಸಿದಂತೆ ಹೀಗೆ ಬಣ್ಣಿಸಿದ್ದಾಳೆ.

ತಥಾಭೂದಸ್ಮಾಕಮ್ ಪ್ರಥಮಮವಿಭಿನ್ನಾ
ತನುರಿಯಮ್ ।
ತತೋನುತ್ವಮ್ ಪ್ರೇಯಾನಹಮಪಿ ಹತಾಶಾ
ಪ್ರಿಯತಮಾ ॥
ಇದಾನೀಮ್ ನಾಥಸ್ತ್ವಮ್ ವಯಮಪಿ
ಕಲತ್ರಮ್ ಕಿಮಪರಮ್ ।
ಮಯಾಪ್ತಮ್ ಪ್ರಾಣಾನಾಮ್ ಕುಲಿಶ
ಕಠಿನಾನಾಮ್ ಫಲಮಿದಮ್ ॥

ಮೊದಲು ನಮ್ಮಿಬ್ಬರ ದೇಹ, ಮನಸ್ಸುಗಳೆರಡೂ ಒಂದೇ ಆಗಿತ್ತು. ಬಳಿಕ ನೀನು ಗಂಡನಾದೆ. ಈ ದುರ್ದೈವಿಯಾದ ನಾನು ಹೆಂಡತಿಯಾದೆ. ವಜ್ರಕ್ಕಿಂತಾ ಕಠಿಣವಾದ ಈ ಪ್ರಾಣಗಳ ಫಲವು ನನಗೆ ದೊರೆತಿತ್ತು. ಹೀಗೆ ಉಭಯತ್ರರನ್ನು ಬಂಧಿಸಿದ ಈ ಪ್ರೇಮವು ಕ್ರಮೇಣ ಕುಂಠಿತವಾಗುತ್ತಾ ಬಂದು ಕೊನೆಗೆ ಕೇವಲ ಪತಿ-ಪತ್ನಿ ಭಾವದ ಸಂಬಂಧವುಳಿದ ಹೆಣ್ಣುಮಗಳೊಬ್ಬಳ ಈ ಚಿತ್ರವು ಅವಳ ಮನೋವೇದನೆಯನ್ನು ಮಾರ್ಮಿಕವಾಗಿ ಬಣ್ಣಿಸುತ್ತದೆ. ಗಂಡನಿಗೆ ಹೆಂಡತಿಯೊಬ್ಬಳೇ.... ಅಂತೆಯೇ ಹೆಂಡತಿಗೆ ಗಂಡನೊಬ್ಬನೇ....ಇದನ್ನರಿತು ಬೆರೆತು ನಡೆಯದೆ, ಆಧುನಿಕತೆಯ ಹೆಸರಿಗೇ ಅಪಚಾರ ಮಾಡಿ ರುಚಿಯಿರುವವರೆಗೆ ಮಾತ್ರ ಜೀವನವೆಂದು ಸುತ್ತಮುತ್ತ ಕಣ್ಣಾಡಿಸಿದರೆ ಅವರ ಬಾಳು ಸಮಸ್ಯೆಯಲ್ಲದೆ ಬೇರೇನು ?....ನಾವೇನು ಪಾಶ್ಚಾತ್ಯರೇ ?.... ಒಂದಲ್ಲದಿದ್ದರೆ ಮತ್ತೊಂದೆಂದು ದುಂಬಿಯಂತೆ ಹೂವಿಂದ ಹೂವಿಗೆ ಹಾರಾಡಲು !....

ಹೀಗೆ ಗಂಡ—ಹೆಂಡಿರದೊಂದು ಸಮಸ್ಯೆಯಾದರೆ ಮನೆಯ ವಾತಾವರಣದ್ದೊಂದು ಸಮಸ್ಯೆ. ತನಗೆ ವಾತಾವರಣ ಒಗ್ಗಿತೆಂದರೆ ತನ್ನ ಹೃದಯವಲ್ಲಿಗೆ ಹೊಂದಿತೆಂದರೆ ಆ ಮನೆ ನಂದನವನವಾದೀತು—ಸಂಸಾರದಲ್ಲಿ ಪರಸ್ಪರ ಮೈತ್ರಿ, ಸಹಾನುಭೂತಿ ಅತ್ಯಾವಶ್ಯಕ. ಬರೀ ಯಾರೊಬ್ಬರ ಅಧಿಕಾರಕ್ಕೆ, ಹಠಕ್ಕೆ ಹೃದಯ ಒಲಿದೀತೆ? ಅದೇನು ಕಲ್ಲೇ....ಕೊರಡೇ....ಮಣ್ಣುಮುದ್ದೆಯೇ ? 'ಒಲಿದರೆ ನಾರಿ, ಮುನಿದರೆ ಮಾರಿ'. ತನ್ನ ಮನ ಪೊಲಿದರೆ ಪ್ರೀತಿ, ವಿಶ್ವಾಸಗಳ ಸಹಕಾರ ದೊರಕಿತೆಂದರೆ ವಿಶಾಲ ಹೃದಯಿ, ಮಮತಾಮಯಿಯಾದಾಳು....ತನ್ನ ಮನೆ, ತನ್ನ ಬದುಕು ಎಂದು ಭಾವಿಸದೆ, ಮಾತಿನ ಹಿರಿತನ ಹೋರಾಟವಿಲ್ಲದೆ, ಆಡದೆ ಮಾಡುವ ಜಾಣೆಯಾದಾಳು....ಪರರ ದುಃಖವನ್ನೇ ತನ್ನದೆಂದು ಭಾವಿಸಿ ಮರುಗಿ, ಮಾಡಿಯಾಳು. ಹೀಗೆ ತಾನು ಸಂತೋಷಪಟ್ಟು ತನಗೆ ಸಂಬಂಧಪಟ್ಟವರನ್ನೂ ಸಂತೋಷದಲ್ಲಿಟ್ಟು ಸುಖಿಸುವ ಹೆಣ್ಣಿನ ಸಂತೃಪ್ತಿಯುಳ್ಳ ಹೃದಯಕ್ಕಿಂತ ಬೇರೆ ಹೊನ್ನಿನ ಗಂಟುಂಟೆ ?

ಈಗಿನ ಕಾಲದಲ್ಲಿ ಕೌಟುಂಬಿಕ ಜೀವನದಲ್ಲಿ ಜಯಗಳಿಸುವುದು ಸಾಮಾನ್ಯವಾಗಿ ದುಸ್ತರವೇ ?.... ಮನಸ್ಸನ್ನು ಹಿಡಿಯುವುದು ಕಷ್ಟ. ಎಂಥವರೂ ಎಡವುತ್ತಾರೆ. ಉಪ್ಪು, ಕಾರ ತಿನ್ನುವ ದೇಹ ಸ್ವಾಭಿಮಾನ, ಸ್ವಾತಂತ್ರ್ಯ ಬಯಸುತ್ತದೆ. ಅದಕ್ಕೆ ಧಕ್ಕೆಯಾಯಿತೆಂದರೆ ಮನಸ್ಸು ನಾನಾ ಯೋಚನೆಗಳಿಗೀಡಾಗುತ್ತದೆ. ಆಗ ನಿಶ್ಚಿತವಿಲ್ಲದ ಮನಸ್ಸು, ಸೈನ್ಯವಿಲ್ಲದ ರಾಜ್ಯದಂತೆ ಯಾರೊಬ್ಬರ ಮಾತಿಗೂ ಕಿವಿಗೊಡಬಹುದು. ತನ್ನ ಬಾಳನ್ನೇ ಹಾಳು ಮಾಡಿಕೊಳ್ಳಬಹುದು.

ಇದಕ್ಕೆ ಇರುವ ಉಪಾಯ ಒಂದೇ ಎನಿಸುತ್ತದೆ. ಹೆಣ್ಣಾದವಳು ಸಂಸಾರದಲ್ಲಿ ಸ್ವಲ್ಪ ಕಾಲ ನೆಮ್ಮದಿಯಾಗಿ ಬಾಳಬೇಕೆಂದರೆ ಹಿಂದಿನದೆಲ್ಲವನ್ನೂ ಮರೆತು, ಮರೆಯುವ, ಮುಂದಿನದನ್ನೆದುರಿಸುವ ಧೈರ್ಯವನ್ನು ಕಲಿಯಬೇಕು. ಗಂಡನ ಉನ್ನತಿ, ಅವನತಿ ಎರಡೂ ಅವಳದೇ....

ಜೀವನ ವಾಸ್ತವಿಕವಾದುದು, ವಿಸ್ತಾರವಾದುದು. ಯಾವುದೊಂದು ಗುರಿಗಾಗಿ ಅದರ ಸಾರ್ಥಕತೆಗಾಗಿ ಬಾಳಬೇಕಾದದ್ದು. ನಾಯಿಕೊಡೆಯಂತೆ ಹುಟ್ಟಿ, ಸಿಕ್ಕಷ್ಟು ಸವಿದು, ನಾಲ್ಕಾರು ಹೆತ್ತು, ಒಂದು ದಿನ ಮಣ್ಣಿಗೆ ಮರೆಯಾಗುವುದೇ ಅದರ ಉದ್ದೇಶವಲ್ಲ. ಮತ್ತೆ ಕೆಲವರು ಮೂಲಕಾರಣವನ್ನೇ ಹುಡುಕದೆ ಎಲ್ಲದಕ್ಕೂ ದೈವವನ್ನೇ ಹಳಿಯುತ್ತಾ ಕೂಡುತ್ತಾರೆ. ತಾವು ಸಚ್ಚರಿತ್ರರಾಗಿದ್ದು, ತಮ್ಮ ಶಕ್ತಿಮೀರಿ ದುಡಿದು ಗಳಿಸಿ ತಮ್ಮವರ ಉನ್ನತಿಯನ್ನು ಹಾರೈಸಿ, ಕೈಸೋತರೆ, ಆಗ ದೈವವನ್ನು ದೂಷಿಸುವುದರಲ್ಲಿ ಸರಿಯೆನಿಸೀತು. ಇದಿಲ್ಲದೆ ತಮ್ಮ ಜೀವನವೇ ಒಂದು ಸಮಸ್ಯೆಯೆಂದು ಒದಗಿದ ದುಃಖಗಳಿಗೆ ಹಾಸಿಗೆ ಹಾಸಿಕೊಟ್ಟರೆ ಸಮಸ್ಯೆ ಸಮಸ್ಯೆಯೇ ಆಗಿರದೆ ನರಕವೂ ಆದೀತು....ಎಂದೇ ಜೀವನದಲ್ಲಿ ಹೆಣ್ಣಿನ ಈ ಬಾಳಿನ ನಾನಾಮುಖ ಹಂತದಲ್ಲಿ ಹಾಸಿಕೊಳ್ಳುವ ಈ ಸಮಸ್ಯೆಗಳಿಗೆ ನಾವು ಸರಿಯಾದ ಕಾರಣ ಹುಡುಕಿ, ಸಹಿಸಿ, ಅರ್ಥಪೂರ್ಣ, ಸಾರ್ಥಕಬಾಳು ಬಾಳಲು ಸಮರ್ಥರಾಗುತ್ತೇವೆಯೇ ಎಂಬುದೇ ಸಮಸ್ಯೆ.

ಇಷ್ಟೆಲ್ಲಾ ಹೇಳಿದ ನಂತರ ಕೊನೆಯದಾಗಿ ಎನಿಸುತ್ತದೆ: ಆಯುಧವನ್ನಿಡಿದು ಶಾರೀರಕ ಶಕ್ತಿಯಿಂದ ರಾಜ್ಯವಾಳಿದ ಮಾತೆಯರಾಗಿ ಹೋದರು. ಭಕ್ತಿಯೇ ಬಂಡವಾಳವಾಗಿಸಿಕೊಂಡು ದೇದೀಪ್ಯಮಾನವಾಗಿ ಬೆಳಗಿ, ಜನತೆಯನ್ನು ಬೆಳಗಿಸಿಹೋದ ತಾಯಿಯರಾದರು. ಆದರೆ ಇಂದಿನ ಆಧುನಿಕ ಯುಗದಲ್ಲಿ ಪಾರಮಾರ್ಥವಿರಲಿ, ಪ್ರಾಪಂಚಿಕ ಜೀವನದಲ್ಲಿ ವಿಜಯಿಗಳಾಗಿ ಬಾಳಿದವರೇ ವಿರಳ ಎನಿಸುತ್ತದೆ.



# ಅನುಭವಶ್ರೀ

- ''ಚಂದ್ರನ ಹಾಗೆ ಸ್ತ್ರೀಯರು ಎರವಲು ಬೆಳಕಿನಲ್ಲಿ ಶೋಭಿಸುತ್ತಾರೆ."

  **—ಜರ್ಮನ್ ಗಾದೆ**

- ''ಸ್ತ್ರೀಯ ಮುಖ್ಯ ಆಯುಧ ನಾಲಗೆ; ಅದನ್ನು ಅವರೆಂದಿಗೂ ತುಕ್ಕು ಹಿಡಿಯಗೊಡುವುದಿಲ್ಲ."

  **—ಫ್ರೆಂಚ್ ಗಾದೆ**

- ಹರಿದ ವಸ್ತ್ರವನ್ನು ಹೊಲಿಯುವುದು ಸುಲಭ. ಆದರೆ ಬಾಲಕರ ಮನಸ್ಸಿನ ಮೇಲಾದ ಗಾಯವನ್ನು ವಾಸಿಮಾಡುವುದು ಬಹಳ ಕಷ್ಟ.

- ನಾವು ಎಂತಹ ಜೀವನವನ್ನು ನಡೆಸಬೇಕೆಂದರೆ, ನಮ್ಮ ಮರಣದನಂತರ ನಮ್ಮನ್ನು ಸುಡುವವರು ಹೂಳುವವರು ಸಹ ಎರಡು ತೊಟ್ಟು ಕಣ್ಣೀರು ಸುರಿಸುವಂತಾಗಬೇಕು.

- ಮನುಷ್ಯ ಎಲ್ಲರಿಗಿಂತ ಮೊದಲು ತನ್ನಿಂದ ತಾನೇ ಮೋಸಹೋಗುತ್ತಾನೆ. ಇದೇ ಎಲ್ಲಕ್ಕಿಂತ ಮೋಸ.

- ದುಡಿಮೆ ಪ್ರತ್ಯಕ್ಷವಾಗಿದೆ; ಭಾಗ್ಯ ಅನುಮಾನವಾಗಿದೆ. ಅನುಮಾನಕ್ಕಿಂತ ಪ್ರತ್ಯಕ್ಷ ಯಾವಾಗಲೂ ಹೆಚ್ಚಿನದು.




# ವಿದ್ಯಾರ್ಥಿಗಳ ಅಶಿಸ್ತಿನ ಸಮಸ್ಯೆ

**ಶ್ರೀ ಕೆ. ವೆಂಕಟರಾಮಯ್ಯ**

"ನಿಮ್ಮ ಶಾಲೆಯ ವಿದ್ಯಾರ್ಥಿಗಳು ಆಟದ ಮೈದಾನದ ಬಳಿ ಅಶಿಸ್ತಿನಿಂದ ವರ್ತಿಸುತ್ತಿದ್ದಾರೆ. ನೀವು ಅವರಿಗೆ ಬುದ್ಧಿ ಹೇಳಬೇಕು"—ಇದು ನನಗೆ ಕ್ರಿಸ್‌ಮಸ್ ರಜಾ ದಿನಗಳಲ್ಲಿ ನಡೆಯುತ್ತಿದ್ದ ಕ್ರಿಕೆಟ್ ಟೂರ್ನಮೆಂಟ್ ಕಾಲದಲ್ಲಿ ಟೂರ್ನಮೆಂಟ್ ಕಮಿಟಿ ಕನ್ವೀನರ್ ಬರೆದು ಕಳುಹಿಸಿದ ಪತ್ರದ ಸಾರಾಂಶ. ನನಗೆ ಬಹಳ ದುಃಖವಾಯಿತು. ಅಶಿಸ್ತಿನ ಮೂಲವನ್ನು ತಿಳಿಯಲು ಪ್ರಯತ್ನಿಸಿದೆ.

ಹಿಂದಿನ ದಿನ ನಮ್ಮ ಶಾಲೆಗೂ, ಕನ್ವೀನರ್ ಅಧ್ಯಾಪಕರಾಗಿರುವ ಶಾಲೆಗೂ ಕ್ರಿಕೆಟ್ ಪಂದ್ಯವಿತ್ತು. ಆಟವನ್ನು ಕಾಲಕ್ಕೆ ಸರಿಯಾಗಿ ಪ್ರಾರಂಭಿಸಲಿಲ್ಲ. ಆಟವನ್ನು ಸಂಜೆ 4-30ಕ್ಕೆ ಮುಗಿಸುವ ಬದಲು 5 ಘಂಟೆಗೆ ಮುಗಿಸುವುದಾಗಿ ಕನ್ವೀನರ್ ಅಂಪೈರ್ ಮೂಲಕ ಆಟಗಾರರಿಗೆ ಭರವಸೆ ಕೊಟ್ಟರು. ನಮ್ಮ ಶಾಲೆಯ ಟೀಂ ಗೆಲ್ಲುವ ಸೂಚನೆಗಳು ಸ್ಪಷ್ಟವಾಗಿದ್ದುದರಿಂದಲೋ ಏನೋ ಎಂಬಂತೆ ಇದ್ದಕ್ಕಿದ್ದ ಹಾಗೆಯೇ ಆಟವನ್ನು 4-40ಕ್ಕೆ ನಿಲ್ಲಿಸಿ, ಅವರ ಟೀಂ ಗೆಲ್ಲಲು ಅನುಕೂಲ ಮಾಡಿಕೊಂಡರು. ಮೈಮರೆತು ಆಟದಲ್ಲಿ ತಲ್ಲೀನರಾಗಿದ್ದ ನಮ್ಮ ವಿದ್ಯಾರ್ಥಿಗಳಿಗೆ ನಿರಾಶೆಯಾಯಿತು. ಬೇಕಾಗಿಯೇ ತಮಗೆ ಅನ್ಯಾಯಮಾಡಿದ್ದಾರೆಂಬ ಅನುಮಾನ ಉಂಟಾಯಿತು. ಕೂಗಾಟ ಶುರುವಾಯಿತು. ಕಾರ್ಯಕರ್ತರು ಮೊದಲು ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಲ್ಲವೆಂಬ ಕಾರಣವೇ ಅಶಿಸ್ತಿನ ಮೂಲವಾಗಿತ್ತು.

ಶಿಕ್ಷಣ ಕ್ಷೇತ್ರದಲ್ಲಿ ವಿದ್ಯಾರ್ಥಿಗಳ ಅಶಿಸ್ತಿನ ಸಮಸ್ಯೆ ನಮ್ಮ ಆಹಾರ ಸಮಸ್ಯೆಯಷ್ಟೇ ಅಪಾಯ ಸ್ಥಿತಿಯಲ್ಲಿದೆ ಎಂಬುದು ವಿವೇಕವಿರುವವರೆಲ್ಲಾ ತಿಳಿದ ವಿಷಯ. ಆದರೆ ಈ ಸಮಸ್ಯೆಗೆ ಅನೇಕ ವೇಳೆ ಹಿರಿಯರ ನಡವಳಿಕೆಯೇ ಮೂಲವಾಗಿರುತ್ತದೆ. ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೆ ಹಿರಿಯರಲ್ಲಿ ವಿಶ್ವಾಸ ಗೌರವಗಳಿರುತ್ತವೆ. ಅವುಗಳ ಜೊತೆಗೆ ಅವರಿಗೆ ಅನ್ಯಾಯಗಳನ್ನು ಪತ್ತೆಮಾಡುವ ಮನೋಭಾವನೆ ಬಹಳ ಸೂಕ್ಷ್ಮವಾಗಿರುತ್ತದೆ.

ಮನೆಯಲ್ಲಿ ಹಿರಿಯರು ಸಣ್ಣ ಮಕ್ಕಳೊಡನೆ ವ್ಯವಹರಿಸುವಾಗ ಪಕ್ಷಪಾತ ತೋರಿದರೆ ಕೂಡಲೇ ಮಕ್ಕಳು ದಂಗೆ ಏಳುತ್ತವೆ. ಹಠ ಮಾಡುತ್ತವೆ. ಹಿರಿಯರ ಮಾತನ್ನು ತಿರಸ್ಕರಿಸುತ್ತವೆ. ಈ ಬಗೆಯ ಅನುಭವಗಳು ಹಲವಾರು ಸಲ ಆದರೆ ಮಕ್ಕಳಿಗೆ ಹಿರಿಯರಲ್ಲಿ ವಿಶ್ವಾಸ, ಗೌರವ ಮಾಯವಾಗಿ ತಿರಸ್ಕಾರ ಬೆಳೆಯುತ್ತದೆ.

ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಉಪಾಧ್ಯಾಯರೇ ಆದರ್ಶ ವ್ಯಕ್ತಿಗಳು. ಉಪಾಧ್ಯಾಯರ ನಡವಳಿಕೆಯಲ್ಲಿ ಪ್ರಾಮಾಣಿಕತೆ, ನಿಸ್ವಾರ್ಥತೆ, ನಿಷ್ಪಕ್ಷಪಾತವನ್ನು ವಿದ್ಯಾರ್ಥಿಗಳು ನಿರೀಕ್ಷಿಸುವುದು ಸ್ವಾಭಾವಿಕ. ಉಪಾಧ್ಯಾಯರಲ್ಲಿ ಈ ಗುಣಗಳು ತಕ್ಕಮಟ್ಟಿಗಿದ್ದು, ಅವರು ತಮ್ಮ ಕರ್ತವ್ಯಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದರೆ ಶಿಸ್ತಿನ ಸಮಸ್ಯೆಯೇ ಇರುವುದಿಲ್ಲ. ಸಣ್ಣವಿಷಯಗಳಲ್ಲೂ ಸಹಾ ವಿದ್ಯಾರ್ಥಿಗಳು ಪಕ್ಷಪಾತವನ್ನು ಸಹಿಸುವುದಿಲ್ಲ.

ಒಂದೇ ಪ್ರಶ್ನೆಗೆ ಇಬ್ಬರು ವಿದ್ಯಾರ್ಥಿಗಳು ಒಂದೇ ಬಗೆಯ ಉತ್ತರ ಕೊಟ್ಟಾಗ ಇಬ್ಬರಿಗೂ ಸಮನಾಗಿ ನಂಬರುಗಳನ್ನು ಕೊಡಬೇಕಾದುದು ಉಪಾಧ್ಯಾಯರ ಕರ್ತವ್ಯ. ಒಬ್ಬನಿಗೆ ನಾಲ್ಕು ಇನ್ನೊಬ್ಬನಿಗೆ ಎರಡು ನಂಬರು ಕೊಟ್ಟಿದ್ದರೆ ವಿದ್ಯಾರ್ಥಿಗಳು ಅದನ್ನು ಪತ್ತೆ ಮಾಡಿ ಉಪಾಧ್ಯಾಯರ ಗಮನ ಸೆಳೆಯುತ್ತಾರೆ. ಆಗ ಉಪಾಧ್ಯಾಯರು ಆ ತಪ್ಪನ್ನು ಕೂಡಲೇ ಸರಿಪಡಿಸಿದರೆ ಸಮಸ್ಯೆ ಬಗೆಹರಿಯುತ್ತದೆ. ಇಲ್ಲವಾದರೆ ವಿದ್ಯಾರ್ಥಿಗಳಿಗೆ ಉಪಾಧ್ಯಾಯರಲ್ಲಿ ಗೌರವ ಕಡಿಮೆಯಾಗುತ್ತದೆ. ಹಾಗೆಯೇ ಇಬ್ಬರು ವಿದ್ಯಾರ್ಥಿಗಳು ಒಂದೇ ಬಗೆಯ ತಪ್ಪನ್ನು ಮಾಡಿದಾಗ ಒಂದೇ ಬಗೆಯ ಶಿಕ್ಷೆಯನ್ನು ನಿರೀಕ್ಷಿಸುತ್ತಾರೆ. ಒಬ್ಬನನ್ನು ಕ್ಷಮಿಸಿ, ಮತ್ತೊಬ್ಬನನ್ನು ಶಿಕ್ಷಿಸಿದರೆ ವಿದ್ಯಾರ್ಥಿಗಳಿಗೆ ಶಿಸ್ತನ್ನು ಮೀರಬೇಕೆಂದು ಆಹ್ವಾನ ಕೊಟ್ಟಂತಾಗುತ್ತದೆ. ವಿದ್ಯಾರ್ಥಿಗಳು ಪ್ರತಿ ನಿಮಿಷವೂ ಉಪಾಧ್ಯಾಯರ, ಹಿರಿಯರ ನಡವಳಿಕೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಿರುತ್ತಾರೆ. ತಮಗೆ ಗೊತ್ತಿಲ್ಲದೆಯೇ ಹಿರಿಯರನ್ನು ಅನುಕರಣೆ ಮಾಡುತ್ತಾರೆ. ಈ ಅನುಕರಣೆಯಲ್ಲಿ ಕೆಟ್ಟದ್ದೂ, ಒಳ್ಳೆಯದೂ ಎರಡೂ ಸೇರಿರುತ್ತವೆ. ಅನೇಕ ವೇಳೆ ವಿದ್ಯಾರ್ಥಿಗಳ ಅಶಿಸ್ತಿಗೆ ಉಪಾಧ್ಯಾಯ ವರ್ಗದವರಲ್ಲಿ ಕಾಣುವ ಲೋಪದೋಷಗಳೇ ಮೂಲವಾಗಿರುತ್ತವೆ.

ಕೆಲವು ವೇಳೆ ಸಮಾಜದಲ್ಲಿ ಹಿರಿಯರ ನಡವಳಿಕೆಯೇ ವಿದ್ಯಾರ್ಥಿಗಳ ಅಶಿಸ್ತಿಗೆ ಪೀಠಿಕೆಯಾಗಿದೆ ಕೆಲವು ತಿಂಗಳ ಹಿಂದೆ "ಗೋವಾ ಯಾರಿಗೆ ಸೇರಬೇಕು?" ಎಂಬ ವಿಚಾರದಲ್ಲಿ ಗೊಂದಲವುಂಟಾದಾಗ ನಮ್ಮ ಸಮಾಜದಲ್ಲಿ ಶ್ರೇಷ್ಠರು ತಮ್ಮ ಪದವಿಗಳಿಗೆ, ಅಧಿಕಾರ ಸ್ಥಾನಗಳಿಗೆ ರಾಜೀನಾಮೆ ಕೊಡುವ ಬೆದರಿಕೆಯ ಸುದ್ದಿ ಪತ್ರಿಕೆಗಳಲ್ಲಿ ದಪ್ಪಕ್ಷರಗಳಲ್ಲಿ ಪ್ರಚಾರವಾಯಿತು. ಕೂಡಲೇ ಇದರ ಪರಿಣಾಮ ಶಾಲಾ ಕಾಲೇಜುಗಳಿಗೆ ಹರಡಿ ಮುಷ್ಕರಗಳು ಮೆರವಣಿಗೆಗಳು ಮೊದಲಾದವು. ನಮ್ಮೂರಲ್ಲಿ ಬೇರೆ ಬೇರೆ ಪ್ರಾಂತ್ಯಗಳಿಂದ ಓದಲು ಬಂದಿರುವ ವಿದ್ಯಾರ್ಥಿಗಳಲ್ಲಿ ಗೋವಾ ಸಮಸ್ಯೆ ಬಗ್ಗೆ ವಾದ ವಿವಾದಗಳು ಹೊಡೆದಾಟಗಳಿಗೂ, ಉಪಾಧ್ಯಾಯರ ಹಿತನುಡಿಗಳನ್ನು ತಿರಸ್ಕರಿಸುವುದಕ್ಕೂ ಕಾರಣವಾದವು. ಭಾಷಣ ಮಾಡುವಾಗ ಮಾತ್ರ "ಭಾರತ ಮಾತೆಗೆ ಜಯವಾಗಲಿ" "ಜಯ್‌ಹಿಂದ್" ಎಂದು ಕೂಗಿ ನಡವಳಿಕೆಯಲ್ಲಿ ಆ ತತ್ವವನ್ನು ಕೊಂದರೆ, ಅದರ ಪರಿಣಾಮ ಕಿರಿಯರ ನಡವಳಿಕೆಯಲ್ಲಿ ಅಶಿಸ್ತಾಗಿ ಪರಿಣಮಿಸದೆ ಇನ್ನೇನಾಗಲು ಸಾಧ್ಯ?

ಇತ್ತೀಚೆಗೆ ಕಾಶಿ ಹಿಂದೂ ವಿಶ್ವವಿದ್ಯಾನಿಲಯದ ಹೆಸರನ್ನು ಬದಲಾಯಿಸುವ ಬಗ್ಗೆ ಪಾರ್ಲಿಮೆಂಟಿನಲ್ಲಿ ನಡೆದ ಚರ್ಚೆ ಆ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ದಂಗೆ ಏಳಲು ಕಾರಣವಾಯಿತು. ಹೆಸರು "ಹಿಂದೂ" ಎಂದಿದ್ದ ಮಾತ್ರಕ್ಕೆ ಜಾತ್ಯತೀತ ತತ್ವವನ್ನು ಪಾಲಿಸಲು ಕಷ್ಟವೇ? ನೆಹ್ರೂ "ಹಿಂದೂ" ಆಗಿದ್ದರು. ಆದರೆ ಅವರಲ್ಲಿ ಜಾತೀಯ ಸಂಕುಚಿತ ಭಾವನೆ, ನಡವಳಿಕೆ ಇತ್ತು ಎಂದು ಅವರ ಶತ್ರುವೂ ಹೇಳಲಾರ. ನಡವಳಿಕೆ ಮುಖ್ಯವೇ ಹೊರತು ಹೆಸರಲ್ಲ. ಆದರೆ ಪಾರ್ಲಿಮೆಂಟಿನ ಚರ್ಚೆಯಲ್ಲಿ ನಡವಳಿಕೆಗಿಂತಲೂ ಹೆಸರಿಗೆ ಹೆಚ್ಚು ಪ್ರಾಮುಖ್ಯತೆ ಇತ್ತು. ಪಾರ್ಲಿಮೆಂಟಿನ ಸದಸ್ಯರು ಚರ್ಚಿಸಬಹುದಾದ ಇನ್ನೂ ಮುಖ್ಯವಾದ ಸಮಸ್ಯೆಗಳು ಬೇಕಾದಷ್ಟಿದ್ದವು ಎಂಬುದು ವಿದ್ಯಾರ್ಥಿಗಳಿಗೆ ಗೊತ್ತಾಗಿರಬೇಕು. ಆದ್ದರಿಂದಲೇ ಹಿರಿಯರಂತೆ ಕಿರಿಯರೂ ಅಲ್ಪ ವಿಷಯಗಳನ್ನೇ ದೊಡ್ಡದು ಮಾಡಿ ತುಂಟಾಟಕ್ಕೆ ತೊಡಗಿದರು.

ವಿದ್ಯಾರ್ಥಿಗಳು ಶಿಸ್ತಿನಿಂದ ವರ್ತಿಸಬೇಕಾದರೆ ಅವರ ಸಂಪರ್ಕ ಹೊಂದಿರುವ ಉಪಾಧ್ಯಾಯರು, ಇತರ ಹಿರಿಯರು ಪ್ರಾಮಾಣಿಕರಾಗಿ, ಶ್ರದ್ಧೆಯಿಂದ ತಮ್ಮ ತಮ್ಮ ಕರ್ತವ್ಯಗಳನ್ನು ನೆರವೇರಿಸಬೇಕು. ಆಗ ವಿದ್ಯಾರ್ಥಿಗಳು ಹಿರಿಯರನ್ನು ಅನುಕರಣೆ ಮಾಡುತ್ತಾರೆ. ಹಿರಿಯರನ್ನು ಗೌರವಿಸುತ್ತಾರೆ. ತಮ್ಮ ತಪ್ಪುಗಳಿಗಾಗಿ ನಾಚುತ್ತಾರೆ. ಶಿಕ್ಷೆಯನ್ನೂ ಸಂತೋಷದಿಂದ ಅನುಭವಿಸುತ್ತಾರೆ. ಆದರೆ ಹಿರಿಯರಲ್ಲಿ ಸಣ್ಣತನ, ಸ್ವಾರ್ಥತೆ, ಪಕ್ಷಪಾತ ಕಂಡರೆ ವಿದ್ಯಾರ್ಥಿಗಳು ಹಿರಿಯರನ್ನು ತಿರಸ್ಕರಿಸುತ್ತಾರೆ. ಲೇವಡಿ ಮಾಡುತ್ತಾರೆ. ಇದೇ ಅಶಿಸ್ತಿನ ಮೂಲ.

# ಜಾನಪದ ಸಾಹಿತ್ಯದಲ್ಲಿ ಜನಜೀವನ ಪ್ರತಿಬಿಂಬ

ಲೇಖಕ:— **ಪಂಡಿತ ಚ. ಮು. ಎರೇಸೀಮೆ.** ಸೆಂಟ್ರಲ್ ಹೈಸ್ಕೂಲ್ ಬೆಂಗಳೂರು.

ಸಹೃದಯನಾದ ಮಾನವನು ತನ್ನ ಸ್ವಂತ ಸುಖ ದುಃಖಗಳನ್ನೂ, ಜೀವನದ ಭಿಜ್ಞಾಭಿಜ್ಞತೆಗಳನ್ನೂ, ಕರ್ತವ್ಯ ಕರ್ಮದ ರೂಪರೇಖೆಗಳನ್ನೂ, ಹೃದಯಾವೇಗದ ಸಮಸ್ತ ಮಾರ್ಮಿಕ ಕಲ್ಪನೆಗಳನ್ನೂ ತನ್ನ ತನ್ನ ಮಟ್ಟದ ಶಬ್ದ ಸಂಪತ್ತಿಯಿಂದ ಕೂಡಿಡಬಲ್ಲನು. ಜನರಿಗಾಗಿಯೊ ಅಥವ ತನಗಾಗಿಯೊ ಜನಜೀವನವನ್ನು ತನ್ನ ಅಂತಃಕರಣ ವೃತ್ತಿಯ ಸಕಲ ರೊಡನೆ ತನಗಿರುವ ಸಂಬಂಧದ ಸ್ಥಾಪನೆಗೆ ಪ್ರಯತ್ನಿಸುತ್ತಾನೆ. ಹೀಗೆ ಗ್ರಾಂಥಿಕವಲ್ಲದ ಹಾಡುಗಳನ್ನೇ ನಾವು ಜಾನಪದ ಸಾಹಿತ್ಯವೆನ್ನುವುದು. ಇಂಥ ಸಾಹಿತ್ಯ ಜನಾಂಗದ ಜೀವಾಳವನ್ನರಿಯಲು ಒರೆಗಲ್ಲು. ಸಂಪೂರ್ಣವಾಗಿ ಅಲ್ಲಿ ಕವಿ ತನ್ನನ್ನೇ ತಾನು ಪ್ರಕಾಶಪಡಿಸಿಕೊಳ್ಳುತ್ತಾನೆ. ಅಲ್ಲಿ ನಡೆಯಿದೆ, ನುಡಿಯಿದೆ, ಬದುಕು ಇದೆ. ಬಾಳು ಇದೆ. ನಯವಿದೆ, ಭಕ್ತಿಯಿದೆ, ಸಹಿಷ್ಣುತೆಯಿದೆ. ಅವರ ಸಮಸ್ತ ಬದುಕಿನ ಕೈಗನ್ನಡಿಯಾಗಿದೆ. ಕುಟ್ಟುವಾಗ, ಬೀಸುವಾಗ ಕಳೆತೆಗೆಯುವಾಗ, ಪೈರು ಕೊಯ್ಯುವಾಗ, ಕೊರೆಯುವಾಗ, ಹಬ್ಬದಲ್ಲಿ ಹಸೆಯಲ್ಲಿ ಎಲ್ಲೆಲ್ಲೂ ಅವರವರ ಜೀವನ ಅನೃತ ರಸಾಯನವೇ ಆ ಸಾಹಿತ್ಯದಲ್ಲಿ ಪ್ರಕಟವಾಗಿದೆ. ಸಾಹಿತ್ಯವಿಲ್ಲದ ಜೀವನವಿಲ್ಲ. ಜೀವನದ ತಿರುಳಿನಲ್ಲಿ ಕೀಳು ಮೇಲೆಂಬುದಿಲ್ಲ ಎಂಬ ತತ್ತ್ವದ ಜೀವಂತ ನಿದರ್ಶನವನ್ನೆಲ್ಲ ಕಾಣಬಹುದು.

ಉದ್ದಾಮ ಭಾಷಾ ಪ್ರಯೋಗಮತಿಗಳ ಕಾವ್ಯ ನಾಟಕಗಳ ಗಭೀರತೆಯಲ್ಲಿ ಆನಂದಾನುಭವ ಪಡೆಯಲು ಗ್ರಾಮೀಣ ನಿರಕ್ಷರ ಕುಕ್ಷಿಗೆ ಶಾಬ್ದಿಕ ಸಂಪತ್ತನ್ನು ಜೀರ್ಣಿಸಿಕೊಳ್ಳುವ ಜೀರಕರಸಾಭಾವದಿಂದ ಸಾಧ್ಯವಿಲ್ಲ ಅವರ ಆಮ್ರೇಡನೆಗೆ ಅವು ಕಲ್ಲುಕಡಲೆ. ಇಂಥವರ ಅಂತಃಸ್ಫೂರ್ತಿಯನ್ನು ಕೆರಳಿಸಿ ಕಲಿಸಿ ಅವರಿಗೆ ಪರಿತೃಪ್ತಿಯನ್ನುಂಟುಮಾಡುವ ಅಥವ ಹೃದ್ಗತಭಾವವನ್ನು ಪ್ರಕಾಶ ಪಡಿಸಲು ಜಾನಪದ ಸಾಹಿತ್ಯವು ಬಹುಮಟ್ಟಿಗೆ ಸಹಕಾರಿ. ಅಲ್ಲಿ ಅವರ ಜೀವನವೇ ಕಾವ್ಯ. ತಾಯಿಯಿಲ್ಲದ ತವರು ಮನೆಗೆ ಹೋಗಿ ತಾಯಿಯಿದ್ದಾಗಿನ ಸವಿ ಸುಖಗಳನ್ನು ನೆನೆದು ಕಣ್ಣೀರು ಹಾಕುತ್ತ ಗಂಡನ ಮನೆಗೆ ಬರುವ ಹೆಣ್ಣು ಮಗಳೊಬ್ಬಳ ಮಾತನ್ನು ಕೇಳಿ—

ಹಡೆದವ್ವ ಇದ್ದರ ಮಡಲಿಗಕ್ಕಿಯ ಹುಯ್ದು।
ನಡುದಾರಿ ದೂರ ಕಳುಹುವಳು।
ನಡುದಾರಿಯದೂರ ಕಳುಹುವಳು ಅತ್ತಿಗೆವ್ವ
ಹೊಚ್ಚಲ ಬಿಟ್ಟು ಇಳಿಯಳೊ ॥

ಈ ಹಾಡು ಯಾವ ಉಚ್ಚತಮ ಸಾಹಿತ್ಯಕ್ಕಿಂತಲೂ ಭಾವಾವೇಗವುಂಟುಮಾಡುವಿಕೆಯಲ್ಲಿ ಕಡಿಮೆಯಿಲ್ಲವೆಂದು ನನ್ನ ಭಾವನೆ. ಭಾವಪೂರ್ಣವಾಗಿ ಹಾಡುಹಾಡಿದಾಗ ಅಯ್ಯೋ ಪಾಪ! ಎನ್ನಿಸುತ್ತದೆ. ಹಾಗೆನ್ನಿಸದಿದ್ದರೆ ಅವನು ರಸಿಕನಲ್ಲವೆಂದೇ ಹೇಳಬೇಕು ಅಥವ ಅವನಿಗೆ ಇನ್ನೊಂದು ಜೀವನದ ಸುಖದುಃಖದ ಕಲ್ಪನೆಯೆ ಇಲ್ಲದ ಶುಷ್ಕ ಹೃದಯವೆನ್ನಬೇಕಾಗುತ್ತದೆ.

ಇಂಥ ಸಾಹಿತ್ಯ ಲಕ್ಷಣವನ್ನುಳಿಯಲು, ಛಂದಸ್ಸು ಭಾಷೆಯ ಬೆಡಗು ಬಿನ್ನಾಣ ಅಲಂಕಾರಾದಿ ಲಾಕ್ಷಣಿಕರ ಮಾನದಂಡ ಹಿಡಿದು ನಿಂತರೆ ಉತ್ತರ ಸಿಕ್ಕಲಿಕ್ಕಿಲ್ಲ. ಭಾವಕ್ಕೆ ತಟ್ಟುವ ಸುಖದುಃಖದ ಕಲ್ಪನೆಗೆ ಮಾತ್ರ ಭೇದವಿಲ್ಲ. ಎಲ್ಲಿ ಜೀವನವೇ ರಸವತ್ತಾದ ಕಾವ್ಯವಾಗಿದೆಯೊ ಅಲ್ಲಿ ಲಘು ಗುರುಗಳ ವ್ಯತ್ಯಾಸವಾಗಲಿ

ಪ್ರಾಸಾನು ಪ್ರಾಸಗಳ ಜಂಜಡವಾಗಲಿ ವ್ಯಾ ಕ ರ ಣ ಶಾಸ್ತ್ರದ ಗೊತ್ತು ಗುರಿಗಳಾಗಲಿ ಇಲ್ಲದಿದ್ದರೇನು? ಶಾಸ್ತ್ರ ಪಾಂಡಿತ್ಯವಿಲ್ಲದ ಅವರನ್ನು ರಸಿಕರಲ್ಲವೆನ್ನ ಲಾಗುವ ಸಾಹಸ ಕೂಡದು. ಆ ಡ ಲಿ ಕ್ಕೆ ಬರುವ ಮಟ್ಟದಲ್ಲಿ ಮಾತ್ರ ಕಡಿಮೆಯಾದರೆ ಎಳೆದು ಕೂಡಿಸಿ ಕೊಳ್ಳುತ್ತಲೂ, ಹೆಚ್ಚಾದರೆ ತೇಲಿಸಿ ಕೂಡಿಸಿಕೊಳ್ಳು ತ್ತಲೂ, ಹಾಡಿದರಾಯಿತಲ್ಲವೆ! ಅಲೌಕಿಕಾನುದಕ್ಕಾಗಿ ಯಲ್ಲವೆ ಸಾಹಿತ್ಯಾವಿರ್ಭಾವ?

ಪಂಡಿತರುಂ ವಿವಿಧಕಳಾ|
ಮಂಡಿತರುಂ ಕೇಳತಕ್ಕ ಕೃತಿಯುಂ ಕ್ಷಿತಿಯೊಳ್|
ಕಂಡರ್ ಕೇಳ್ವೊಡೆ ಗೊರವರ|
ದುಂಡುಚಿಯೇ ಬೀದಿವರಿಯೆ ಬೀರನಕಥೆಯೇ||

ಇತ್ಯಾದಿಯಾಗಿ 'ಮಧುರ' ಸಂಥ!ಪ್ರೌಢಕವಿಗಳು ಕೆಲವರು ಬೀರನ ವೀರಗಾರಪದ ಗೊರವರ ಹಾಡುಗ ಳನ್ನು ಗೇಲಿಮಾಡಿದುದೂ ಉಂಟು. ಹಾಗೆ ಅವರು ಗೇಲಿಮಾಡಿದರೂ ಬಾಧಕವಿಲ್ಲವೆಂದು ತೋರುತ್ತದೆ. ಏಕೆಂದರೆ 'ಪಂಡಿತರೂ ವಿವಿಧ ಕಳಾಮಂಡಿತರೂ' ಕೇಳುವ ಓದುವ ಕಾವ್ಯಗಳು ಗೊರವರ ದುಂಡುಚಿಯಲ್ಲಿ ವೀರಗಾರ ಹಾಡಿನಲ್ಲಿ ಆಸಕ್ತಿಯಿಟ್ಟು ಕೇಳಿ ಆ ರಸಗಡ ಲಲ್ಲಿ ಮುಳುಗಿ ಆನಂದಾನುಭವ ಪಡೆವ ಸಾಮಾನ ಜನಕ್ಕೆ ಬೇಕಿಲ್ಲ. ಅದು ಅವರ ದೃಷ್ಟಿಯಲ್ಲಿ ಉಕ್ಕಿನ ಕಡಲೆ. ಹಲ್ಲಿಲ್ಲದ ಬಾಯಿ ಕಬ್ಬನ್ನು ತಿನ್ನಬಯಸಿದಂತೆ.

ಕವಿತೆಯ ಮೂಲ ಜನವಾಣಿ, ಅದು ಅಭಿವೃದ್ಧಿ ಗೊಂಡು ಕವಿವಾಣಿಯಾಯಿತು. ಆದರೆ ದಿನದಿನದ ಕಾಲ ಕಾಲದ ಬೆಳವಣಿಗೆಯನ್ನನುಸರಿಸಿಯೇ ಲಾಕ್ಷಣಿಕ ನಿಬಂಧನೆ, ಪಾರಿಭಾಷಿಕ ಶಬ್ದಪುಂಜ, ಶಾಸ್ತ್ರದ ಬಿಗುವು ಬಿತ್ತು. ಬಿಗಿದ ರಥವಾಯಿತು. ಲಾಕ್ಷಣಿಕರ ನಿಬಂಧನೆಗೆ ಸಂಪೂರ್ಣ ಸಿಕ್ಕು ರಚಿಸಿದ ಕೆಲವು ಕಬ್ಬಗಳು ಕಗ್ಗಗ ಳಾದುವು. ಇಂಥ ರಥ ಓಡಿಸಲು ಪಂಡಿತರೂ, ಟೀಕಾಕಾ ರರೂ ಮುಂತಾದ ಪ್ರಬಲಾಶ್ವಗಳ ಬೆಂಬಲ ಬೇಕಾ ಯಿತು. ಹೀಗಿರುವಾಗ ಜನವಾಣಿಯೇ ಕವಿವಾಣಿಗೆ ಮೂಲವೆಂದಹಾಗಾಯಿತು. ಜನವಾಣಿ ಬೇರು ಕಾಂಡ ಗಳು, ಕವಿವಾಣಿ ಪುಷ್ಪಪಲ್ಲವ; ಜನವಾಣಿ ಒರಟು, ನಯ ವಿಲ್ಲದ್ದು. ಕವಿವಾಣಿ ನಯ. ಮನದ ಉಕ್ಕನ್ನು ಕಲಿತ ಮಾತಿನ ಚೌಕಟ್ಟಿನಲ್ಲಿ ಶಾಸ್ತ್ರದ ಕನ್ನಡಿಯೊಳಗೆ ಕೂಡಿ ಸಿದ್ದು. ಇವರಲ್ಲನೇಕರು ನರಕವಿಗಳು; ವ ರ ಕ ವಿ ಗ ಳ ಮಾತುಬೇರೆ. ಮಗುವು ತಾನು ಆಟವಾಡಲು ಕಟ್ಟಿದ ಮನೆಯ ವಾಸ್ತು ಶಿಲ್ಪ ಪ್ರೌಢಿಮೆಯನ್ನು ನೋಡಿ ಹೊಂದುವ ಆನಂದ ಅಥವತನ್ಮಯತೆಹಳೆಬೀಡಿನ ವಾಸ್ತು ಶಿಲ್ಪಿ ನೋಡಿ ಪಡೆಯಲಾರದು. ಅದು ಜಟಿಲ ಅದರ ತಲೆಗೆ.

ಒಟ್ಟಿನಲ್ಲಿ ಜಾನಪದ ಪದ್ಯಗೀತಗಳು "ನಿರಕ್ಷರ ಕುಕ್ಷಿಯ ಕುಟೀರದಿಂದ ಹೊರ ಹೊಮ್ಮಿದ ಮಹಾ ಮಹಿಮ ಸಾಹಿತ್ಯ. ಸಾಹಿತ್ಯ ರಾಜ್ಯೋದ್ಯಾನದ ರಾಜೀ ವವಲ್ಲ" ರಾಜಾಶ್ರಯ ಧನಿಕರಾಶ್ರಯದಿಂದ ಜೀವ ಹಿಡಿದ ಹಂಗಿನರಮನೆಯಲ್ಲ. ಕನಕಾಭಿಷೇಕ ಕಚ್ಚಳಿಗೆ ಜೋತು ಬಾತು ತಿಣಿತಿಣಿಕಿ; ಕೂಡಿಸಿ ಬರೆದ ಕಂತೆಯಲ್ಲ. ಧನದಾಸೆಗಾಗಿ "ಹೊಲ್ಲದ ನೃಪನಿಗೆ ಸಲ್ಲದ ಸಲ್ಲದ ಗುಣಗಳನ್ನು ಹುಡುಕಿ ಕೂಡಿಸಿ ಹಾಡಿ ಸರಸ್ವತಿಗೆ ಭಂಗ ತರುವಂಥದಲ್ಲ. ಅ ಥ ವ ತನ್ನಿಷ್ಟವ್ಯಕ್ತಿಯನ್ನು ಇಂದ್ರಚಂದ್ರ. ರವಿ, ಕರ್ಣ, ದಧೀಚಿ, ಬಲೀಂದ್ರರೆಂ"ದು ಹೊಗಳಲಾವಿರ್ಭವಿಸಿದುದಲ್ಲ. ಜೀವನದ ನಿತ್ಯ ಸತ್ಯ ವನ್ನು ನೇರವಾಗಿಯೊ ವಿಡಂಬನೆಯಿಂದಲೊ ಹೇಳಿದ.ದು ಕೆಲಮಟ್ಟಿಗೆ ''ನಿಯತಿಕೃತ ನಿಯಮರಹಿತವಾದದ್ದು, ಹ್ಲಾದೈಕ ಮಯಿಯಾದದ್ದು, ಅನನ್ಯಪರ ತಂತ್ರವಾ ದುದು. ನವರಸ ರುಚಿಕವುಳ್ಳದ್ದು''ಎಂದರೂ ತಡೆದೀತು. ಆದರೆ ಆ ಸತ್ಯ ದೃಷ್ಟಾರ ಕವಿಗೆ ಅದು ಆಕಲ್ಪ ಚಿರಸ್ಥಾ ಯಿಯಾಗ ಬೇಕೆಂಬ ಬಯಕೆಯೂ ಇದ್ದಂತಿಲ್ಲ. ಆದ್ದ ರಿಂದಲೆ ಕೊರಲಿನಿಂದ ಕೊರಲಿಗೆ, ಕರ್ಣದಿಂದ ಕರ್ಣಕ್ಕೆ ಬಂದುದಾಗಿಯೇ ಇನ್ನೂ ಜೀವಂತವಾಗಿದೆ; ಮುಂದೂ ಉಳಿಯುತ್ತದೆ. ಹಾಡು ಹಾಡಿದವನ ಅಪೇಕ್ಷೆಯಿಲ್ಲ ದಿದ್ದರೂ ಕಲ್ಪಾಂತ ಚಿರಸ್ಥಾಯಿಯಾಗಿಯೆ ಇರುತ್ತದೆ. ಆ ಸಾಹಿತ್ಯವನ್ನು ಅವರ ಬಾಳಿನಲ್ಲಿ ಬದುಕಿನಲ್ಲಿ ಬೆಸುಗೆ ಗೊಂಡ ರೀತಿಯಲ್ಲಿಯೆ ಒಂದೆರಡರ ಸಮಾಲೋಚನೆ ಮಾಡೋಣ. ಆಗ ಅದರ ಹದ ಬೆದೆ ಗೊತ್ತಾದೀತು. ಘನತೆ ಗಂಭೀರತೆಗಳು ವ್ಯಕ್ತವಾದಾವು.

ಭರತ ಖಂಡ ವ್ಯವಸಾಯ ಪ್ರಧಾನ ರಾಷ್ಟ್ರ. ಕರ್ನಾಟಕ ದೃಷ್ಟಿಯಿಂದಂತೂ ಈ ಮಾತು ಪೂರ್ಣ ಪ್ರಯೋಜನಕಾರಿ. ಇಲ್ಲಿಯ ಗ್ರಾಮಾಂತರ ಜನಜೀವ ನದ ಭಾಗ್ಯಲಕ್ಷ್ಮಿಯೆ ವ್ಯವಸಾಯ ಮತ್ತು ತದುಪಕರ ಣಗಳು. ಒಂದೊಂದು ದೇಶದ ಪ್ರಾಕೃತಿಕ ಸೌಂದರ್ಯ ಒಂದೊಂದು ಕಾಲದಲ್ಲಿ ಹೃದಯೋಲ್ಲಾಸಿಯಾಗಿರು ತ್ತದೆ. ಕರ್ನಾಟಕದಲ್ಲಿ ಪ್ರಕೃತಿಸೌಂದರ್ಯ ಸೂರೆಗೊಂಡು ಮನವನ್ನು ವಿಕಾಸಗೊಳಿಸುವ ಕಾಲ ಭಾದ್ರಪದ, ಆಶ್ವ

ಯುಜ ಕಾರ್ತಿಕ ಮಾಸಗಳು. ಎಂದಿಲ್ಲದ ತುಂಬು ಸಿರಿಯಿಂದ ಪ್ರಕೃತಿಯು ಆಗ ನಯನಮನೋಹರವಾಗಿ, ಭವಿಷ್ಯ ಬಾಳಿನ ಭಾಗ್ಯದೇವತೆಯಾಗಿ, ವರ್ಷವೆಲ್ಲ ದುಡಿದ ದುಡಿಮೆಯ ಪ್ರತಿಫಲವಾಗಿ ಅನ್ನದೇವತೆಯು ಪ್ರತ್ಯಕ್ಷವಾಗಿ ಮೈದೋರಿರುತ್ತಾಳೆ. "ಕ್ಲೇಶಃಫಲೇನ ಹಿ ನವತಾಂ ವಿಧತ್ತೆ ("ಎಂಬ ಕಾಳಿದಾಸೋಕ್ತಿಯಂತೆ ಒಕ್ಕಲುಮಗನಾಗ ನವೋಲ್ಲಾಸ ಚೇತನನಾಗಿರುತ್ತಾನೆ. ಆದುದರಿಂದಲೇ ಈ ಮಾಸಗಳಲ್ಲಿಬರುವ ಗೌರಿ, ಗಣೇಶ, ಮಹಾನವಮಿ, ಸೀಗೆ ಹುಣ್ಣಿಮೆ, ದೀವಳಿಗೆ (ಹಟಹಬ್ಬ) ಈ ಹಬ್ಬಗಳನ್ನು ಆಚರಿಸುತ್ತಾನೆ ಈ ಹಬ್ಬಗಳು ಕೇವಲ ಊಟಕ್ಕಲ್ಲ. ಪ್ರಕೃತಿ ತನಗಿತ್ತ ಸಂಪತ್ತಿಯ ಸೂರೆಯ ಪ್ರತ್ಯುಪಕಾರಕ್ಕೋ, ಅಥವ ಭಕ್ತಿಯ ಪರಾಕಾಷ್ಠ ಪ್ರಕಟನೆಗೊ. ಅಂತು ಎರಡು ತಿಂಗಳ ಅವಧಿಯಲ್ಲಿ ಐದು ದೊಡ್ಡ ಹಬ್ಬಗಳ ಆಚರಣೆಯು ಇವನ ಅಮಿತೋತ್ಸಾಹದಲ್ಲಿ ಆಚರಿಸಲ್ಪಡುತ್ತವೆ.

ದೀವಳಿಗೆ ಹಬ್ಬದ ಹೊತ್ತಿಗೆ ಎತ್ತ ನೋಡಿದತ್ತ ಭೂಮಿತಾಯಿ ಹೊಂಬಣ್ಣದ ಉಡೆಯುಟ್ಟು ತೊಟ್ಟು, ಮಡಿಲುದುಂಬಿ ತನ್ನನ್ನು ಸೇವಿಸಿ ಶ್ರಮಿಸಿ ಬೆವರು ಸುರಿಸಿದ ಮಕ್ಕಳಿಗೆ ಪಾಕಮಾಡಿ ಉಣಿಸಲು ಸಿದ್ಧಳಾಗಿ ಬಾಗಿ ಬಳ್ಕಿ ನಿಂತಿದ್ದಾಳೆ ಬತ್ತದ ಗದ್ದೆಗಳು ಹೊಂಪಾಗಿ ಸಲಹಿದ ಭೂದೇವಿಗೆ ನಮಸ್ಕರಿಸುವಹಾಗೆ ಕಿಕ್ಕಿರಿದ ಫಲಭಾರದಿಂದ ಕೊರಳ್ವಾಗಿ ನಿಂತಿವೆ. ಉದ್ದಂಡತೆಯು ಬಿರ್ಮದಿನ ಗರಿಯನ್ನು ತಲೆಗೆ ಸಿಕ್ಕಿಸಿಕೊಂಡು ಕಬ್ಬು ಹಬ್ಬುಗೊಂಡು ಎದೆ ಸೆಡೆಸಿ ಉತ್ಸಾಹದಲ್ಲಿ ನಿಂತಿದೆ. ಸಪ್ಪು ನೀರಿತ್ತವನಿಗೆ ಸಿಹಿನೀರೆರೆಯುವ ತವಕದಿಂದ ರಸದುಂಬಿ. ರತ್ನ ಗರ್ಭೆ ಭೂದೇವಿ. ತನ್ನ ಅನಂತ ಸಂಪತ್ತನ್ನು ಸಹಸ್ರ ಸಹಸ್ರ ಕರಗಳಿಂದ ಮೇಲೆತ್ತಿ ಮುತ್ತಿನ ತೊಂಗಲನ್ನೇ ಜಗತ್ತಿಗೆ ತೋರಿಸುವಂತೆ ಕಾಳುಗಟ್ಟಿ ಜೋಳ ಕಳೆಗೊಂಡು ಬೆಳೆದು ನಿಂತಿದೆ. ಹತ್ತಿಯ ಹೊಲ ಸ್ಮಿತವದನಗೊಂಡು ಅಲ್ಲೊಂದು ಇಲ್ಲೊಂದು ಬಿಳಿಮೊಳೆಯೊಡೆದು ಬೆಳೆದವನನ್ನು ಕಳೆಗೊಳಿಸಲು ಉಲ್ಲಾಸಗೊಂಡು ಬೆಳೆದುನಿಂತಿದೆ. ಹೀಗೆ ಪ್ರಕೃತಿಯಲ್ಲೂ ಹಬ್ಬ, ಮನೆಯಲ್ಲೂ ಹಬ್ಬ, ಮನದಲ್ಲೂ ಹಬ್ಬ. ಈ ಕಾಲದಲ್ಲಿ ಈ ಬೆಳೆಗಳೆಲ್ಲ ಇಷ್ಟೊಂದು ಬೆಳೆಯುವವರೆಗೆ ಒಕ್ಕಲುಮಗ ಚಳಿಮಳೆಯುಂಡು ಹೊಟ್ಟೆ ನೆತ್ತಿ ಕಟ್ಟಿ ಮನೆಮಂಡಳಿಯ ಸಹಕಾರ ಪಡೆದು ಮಣ್ಣಿನಲ್ಲಿ ಮಣ್ಣಾಗಿ, ಕಲ್ಲಿನಲ್ಲಿ ಕಲ್ಲಾಗಿ ದಿನದಿನ ಮುಗಿಲುನೋಡಿ ಮಳೆಗೆ ಹರಕೆ ಹೊತ್ತು ಹಾದಿ ಬಸವ ಬೀದಿಬಸವನಿಗೆ ಹೆಡಿಗೆ ಪರ್ವಗಳನ್ನು ಮಾಡಿ, ಗುಡಿ ನಾರಾಯಣನಿಗೆ ಹೂವೇರಿಸಿ ತನ್ನ ದುಡಿತದ ಫಲದ ಸಿರಿಯರಮನೆಯಲ್ಲಿ ಸೂರೆಗೊಂಡ ಹೃದಯದಿಂದ ಹೊಸ ಹುರುಪಿನಲ್ಲಿ ಶ್ರಮಮರೆತು ಪೂರೆಗಳೆದ ಧಣಿಯಾಗಿದ್ದಾನೆ. ಈಗವನ ಆನಂದಕ್ಕೆ ಪಾರವಿಲ್ಲ ತನ್ನ ದನಗಳೂ ಬಾಯ್ತುಂಬ ಹಸುರು ಮೇದು ಪುಷ್ಟಿ ತುಷ್ಟಿ ಪಡೆದಿವೆ. ಭೂಲಕ್ಷ್ಮಿ ತನಗೀಯುವ ವರಗಳನ್ನೆಲ್ಲ ಸಂಗ್ರಹಿಸಿಕೊಳ್ಳುವ ರೈತನಿಗೆ ಇನ್ನು ಹಬ್ಬಗಳ ಜಂಜಡ ಕಡಿಮೆ; ಕೊನೆಯ ದೊಡ್ಡ ಹಬ್ಬವೇ ದೀವಳಿಗೆ. ಇದು ಅವನ ದೃಷ್ಟಿಯಲ್ಲಿ ಹಟ್ಟಿಯ ಹಬ್ಬ. ದನದ ಕೊಟ್ಟಿಗೆಯ ಹಬ್ಬ, ಇದೇ ಹೆಸರಿನ ಒಂದು ಅಡಿಗೆಯನ್ನು ಆ ದಿನಮಾಡುತ್ತಾನೆ. ಕೊಟ್ಟಿಯ ಕಡಬು ಎಂದು ಅದರ ಹೆಸರು. ದನ ಅವನ ಕಲ ಸಾಧನ ಸಂಪತ್ತು. ಅಂತೆಯೆ ಪೌರಾಣಿಕ ದೀಪಾವಳಿ ರೈತನ ಹಟ್ಟಿಯ ಹಬ್ಬ. ಬಲಿಯನ್ನಂದು ಪಾತಾಳಕ್ಕೆ ಹರಿ ಮೆಟ್ಟಿದನೊ, ಪಾಂಡವರು ಅಜ್ಞಾತವಾಸ ಮುಗಿಸಿದರೊ, ಇನ್ನೇನೇನು ಪ್ರಾಚೀನ ಘಟನೆಗಳು ಘಟಿಸಿದವೊ ಅವನಿಗೊಂದೂ ಗೊತ್ತಿಲ್ಲ. ಅವನದಾದರೂ ಅಂದು ದನಗಳ ಶೃಂಗಾರ, ಕೊಟ್ಟಿಗೆಯ ಶೃಂಗಾರ; ಕೊಟ್ಟಿಗೆಯಲ್ಲಿ ಸೆಗಣಿಯ ಹಟ್ಟಿಯನ್ನು ಕಟ್ಟಿ ಹುಚ್ಚೆಳ್ಳಿನ ಹೂವಿನಿಂದ ಪೂಜೆ, ಮಧ್ಯದಲ್ಲಿ ಬನ್ನಿಯ ಮರದ ಮೇಟಿ, ಎತ್ತುಗಳ ಕೋಡಿಗೆಲ್ಲ ಬಣ್ಣ, ತನ್ನ ಮತ್ತು ಮನೆಯ ಜನಗಳ ಆಭರಣಗಳೆಲ್ಲ ಎತ್ತಿನ ಹಣೆಯಲ್ಲಿ, ಜೂಲು ವಗೈರೆ ಇಲ್ಲದಲ್ಲಿ ತನ್ನ ಹೆಂಡತಿಯ ರೇಷ್ಮೆ ಸೀರೆ ಎತ್ತಿನ ಮೈಮೇಲೆ. ಗಾಡಿಗೆ ಸೀರೆಯುಡಿಸಿ ಲಕ್ಷ್ಮಿಯಂದು ಅಲಂಕಾರ. ಮನೆಯ ಮಗಳು ಗಂಡನ ಮನೆಯಿಂದ ಗಂಡನೊಡನೆ ತವರುಮನೆಯ ಸಂತೋಷದೊಡನೆ ಸಮಭಾಗಿಯಾಗಿ ತವರ ನಡುಮನೆ ಕಂಬದ ದೀಪ ಚಿರಂತನವಾಗಿರಬೇಕೆಂದು ತುಂಬು ಹೃದಯದಿಂದ ಹರಕೆಹೊತ್ತು ತಂದೆಯ ನೂಲೆಳೆಯನ್ನುಟ್ಟು ಹೋಗಲು ಬಂದಿದ್ದಾಳೆ. ಕೊರಳಲ್ಲಿ ಹಂಗುನೂಲಿನ ಕಂಥೆ ಕಾಣುತ್ತಿರುತ್ತದೆ. ಎಲ್ಲೆಲ್ಲೂ ಆನಂದದ ಹೊನಲು ಹರಡಿ ಹುಚ್ಚು ಹೊಳೆಯಾಗಿದೆ. ಹೊತ್ತು ಮುಳುಗುತ್ತಲೆ ಕೊಟ್ಟಿಗೆಗೆ ದನಗಳು ಬರುವ ಸಮಯ ನೋಡುತ್ತ ಮುತ್ತೈದೆ ಮಗಳು ಆರತಿ ಸಿದ್ಧಪಡಿಸಿ ಮಡಿಯುಟ್ಟು ಸಿದ್ಧಳಾಗಿ ನಿಂತಿದ್ದಾಳೆ. ಆಗ ಒಂದು ಹಾಡು ಹಾಡುತ್ತಾಳೆ ಉಳಿದ ಮುತ್ತೈದೆಯರೊಡನೆ. ಹಾಡು 'ರಾಗೆ

ರಸ ಪದ ಕಸ'ಎಂಬ ಗಾದೆಯಂತಲ್ಲ. ಪದ ರಾಗ ಎರಡೂ ಹಸ ಮತ್ತು ರಸ.

ಬಲ್ಲಾಳ ಬಲವಿಂದ್ರರ ಕಾಲಕೆಲ್ಲರು
ಸಿರಿವಂತರ ।
ಬಲ್ಲಾಳ ಬಂದು ಬಾಗಿಲದಿ ನಿಂತರ
ಹುಲ್ಲು ಕಡ್ಡೆಲ್ಲ ದವನವ ।
ಹುಲ್ಲು ಕಡ್ಡೆಲ್ಲ ದವನವ ನಮ್ಮೂರ
ಕಲ್ಲ ನೀರೆಲ್ಲ ತಿಳಿದಾವ ॥ಪಲ್ಲ॥

ಹಿತ್ತಿಲ ದಾಗೊಂದು ಹಿಟ್ಟುಗುಂಬಳಕಾಯಿ ।
ಹಿಟ್ಟಾಕಿ ಅದಕ ಮೆಣಸ್ಹಾಕಿ ।
ಪಾಂಡವರ ಅಕ್ಕ ಸವೆದಾಳೊಂದಡಿಗ್ಯಾಗ
॥ಬಲ್ಲಾಳ....॥

ಬಾಗಲವಾಗೊಂದು ಹಾಲು ಗುಂಬಳ ಕಾಯಿ ।
ಹಾಲ್ಹಾಕಿ ಅದಕ ಮೆಣಸ್ಹಾಕಿ ॥
ಪಾಂಡವರ ಅಕ್ಕ ಸವೆದಾಳೊಂದಡಿಗ್ಯಾಗ
॥ಬಲ್ಲಾಳ _॥

ಅಪ್ಪನೆತ್ತು ಬರುವಾಗ ಉಪ್ಪರಿಗಿ ಮೇಲಿದ್ದೆ ।
ಮುತ್ತಿನಾರತಿಯು ಹಿಡಿದಿದ್ದೆ
ಮುತ್ತಿನಾರತಿಯು ಹಿಡಿದಿದ್ದೆ । ಅಪ್ಪನ ।
ಎತ್ತು ಬಂದು ಹಟ್ಟಿಯ ಹೊಗುವಾಗ
॥—ಬಲ್ಲಾಳ ....॥

ಅಣ್ಣನೆತ್ತು ಬರುವಾಗ ಕಟ್ಟೆಯ ಮೇಲಿದ್ದೆ ।
ಹೂವಿನಾರತಿಯು ಹಿಡಿದಿದ್ದೆ ।
ಹೂವಿನಾರತಿಯು ಹಿಡಿದಿದ್ದೆ ಅಣ್ಣನ ।
ಎತ್ತು ಬಂದು ಹಟ್ಟಿಯ ಹೊಗುವಾಗ
॥ಬಲ್ಲಾಳ॥

ವರುಷಕ್ಕೆಬರುವುದು ಅರಿಸಿಣ ದೀವಳಿಗಿ ।
ಅರಿಸಿಣ ಸೆರಗು ಮರೆಮಾಡಿ ।
ಅರಿಸಿಣ ಸೆರಗು ಮರೆಮಾಡಿ ತಂಗೆವ್ವ ।
ಅರಸಗಾರತಿಯು ಬೆಳಗ್ಯಾಳೊ ॥-ಬಲ್ಲಾಳ....॥

ಅಸುರ ಕೀರ್ತಿ ಕಾಯವಾಗಿ ಹೋದ ಹೊಯ್ಸಳ ಬಲ್ಲಾಳ ರಾಜರ ಪುಣ್ಯಶ್ಲೋಕ ನಾಮವೆತ್ತಿ ಪ್ರಾರಂಭವಾದ ಪದ್ಯವಿದು. ಬಲ್ಲಾಳ ಚಕ್ರವರ್ತಿಗಳು ವ್ಯಕ್ತಿವ್ಯಕ್ತಿಗಳ ಹೃದಯದಲ್ಲೂ ಹೊತ್ತಿಸಿಟ್ಟ ಮಣಿದೀಪದ ಮಹತ್ತು ಬೃಹತ್ತುಗಳು ಇಂದಿಗೂ ರಣರಣಿತವಾಗುವುದು ಗೊತ್ತಾಗುವುದು. ಬಲ್ಲಾಳರಾಯ ಬಂದು ಬಾಗಿಲಲ್ಲಿ ನಿಂತರೆ ಸಾಕು ಹುಲ್ಲುಕಡ್ಡಿಯಲ್ಲ ದವನವಾಗುತ್ತದೆ. ಕಲ್ಲು ನೀರೆಲ್ಲ ತಿಳಿ. ರಾಜ್ಯದಲ್ಲಿ ಬಡವರೇ ಇರಲಿಲ್ಲ. ಎಲ್ಲರೂ ಸಿರಿವಂತರೇ. ದೀವಳಿಗೆ ಅರಿಸಿಣ ದೀವಳಿಗೆ. ಸೊಂಪಾಗಿ ಬೆಳೆದ ಪೈರುಪಚ್ಚೆಗಳು ಹೊಂಬಣ್ಣದಿಂದ ಪೂರ್ಣವಾಗಿರುತ್ತವೆ. ಸಂಜೆ ಅಪ್ಪನ ಅಣ್ಣ ಎತ್ತು ಹಟ್ಟಿಯನ್ನು ಹೊಗುವಾಗ ಹೂವಿನ ಮುತ್ತಿನ ಆರತಿಯನ್ನು ಅವಕ್ಕೆ ಬೆಳಗಿ ಅರಿಸಿಣ ಸೆರಗು ಮರೆಮಾಡಿ ಅರಸನಿಗಾರತಿ ಬೆಳಗುವಳು. ಸೋಬಾನದ ಮಟ್ಟದಲ್ಲಿ ಹಾಡು ಹಾಡಿದಾಗ ಅಪೂರ್ವ ಕಳೆಯಿಂದಕೂಡಿ ಮನಸ್ಸಿನಲ್ಲಿ ದಿವ್ಯಸಾಹಿತ್ಯದ ಸೊಗಸು ಗೋಚರಿಸುವುದು. ಹಬ್ಬದ ಆಚರಣೆಯಲ್ಲಿ ಜೀವನ ಸೂತ್ರವೆಲ್ಲ ಗರ್ಭೀಕೃತವಾಗಿದೆ. ಭಾಷೆ ಒರಟಾಗಿರಲಿ, ಛಂದಸ್ಸು ಹೋಗಿರಲಿ ಹಾಡಿನ ಮಟ್ಟ ಕೆಟ್ಟಿಲ್ಲ. ರಮ್ಯವಾಗಿ ದನಿಗೂಡಿಸಿ ಮೊದಲಿಬ್ಬರು ಅನಂತರ ಇಬ್ಬರು ಹೀಗೆ ಹಿಮ್ಮೇಳ. ಮುಮ್ಮೇಳಗೊಂಡು ಹಾಡು ಹಾಡಿ ಮುಗಿಸಿದಾಗ ಮುಗಿಯಿತೆ, ಎನ್ನುವಂತಾಗುವುದು.

ಹೊಯ್ಸಳ ಚಕ್ರವರ್ತಿಗಳ ಆಳ್ವಿಕೆ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾದುದು ಚರಿತ್ರೆಯಲ್ಲಿ ಪ್ರಸಿದ್ಧ. ಹಲವಾರು ಮತಗಳು ಪರಸ್ಪರ ಹೊಂದಿದ ಕಾಲ. ಶಿಲ್ಪಕಲೆ ಸಾಹಿತ್ಯಗಳ ಸುವರ್ಣಯುಗ ಕನ್ನಡ ಸಾಹಿತ್ಯವಾಹಿನಿಯು ಹರಿದು ಬರುವಾಗ ಇವರ ಕಾಲದಲ್ಲಿ ಆಳವಾಗಿ ಮಡುವುಗಟ್ಟಿ ನಿಂತು ಮುಂಪೆ ಸಾಗಿದುದು ಪ್ರಸಿದ್ಧವಾಗಿದೆ. ಕವಿ ಜನ್ನನಿಗೆ ಆಶ್ರಯವಿತ್ತು ಅವನಿಗೆ ಕವಿಚಕ್ರವರ್ತಿ ಎಂಬ ಬಿರುದು ಕೊಟ್ಟ ನರಸಿಂಹಬಲ್ಲಾಳನು ಕ್ರಿ. ಶ. 1172 ರಿಂದ 1222 ರವರೆಗೆ ರಾಜ್ಯವಾಳಿದನು. ಹರಿಹರ, ಕೆರೆಯ ಪದ್ಮರಸ, ರಾಘವಾಂಕ, ರುದ್ರಭಟ್ಟ, ನೇಮಿಚಂದ್ರ ಮಲ್ಲಿಕಾರ್ಜುನ, ಕೇಶಿರಾಜ, ಅಭಿನವ ಪಂಪ ಮೊದಲಾದ ಪ್ರೌಢ ಕವಿ ಕುಲಕ್ಕೆ ಈ ರಾಜಮನೆತನ ವಿಪುಲಾಶ್ರಯವಿತ್ತಿದೆ. ರಾಜರುಗಳೂ ಮಹಾರಸಿಕರೂ ಶಾಸ್ತ್ರಜ್ಞರೂ ಉದಾರಹೃದಯರೂ ಆಗಿ

ದ್ದರು. ಅಂತೆಯೆ ಇಂದಿಗೂ ಹಳ್ಳಿಹಳ್ಳಿಗಳಲ್ಲಿ ಅವರ ಕೀರ್ತಿ ಜೀವಂತವಾಗಿದೆ.

ಮಹಾನವಮಿ, ಸೀಗೆ ಹುಣ್ಣಿಮೆ, ದೀವಳಿಗೆ ಈ ಮೂರು ಹಬ್ಬಗಳು ರೈತರಿಗೆ ಪ್ರಮೋದ ಪ್ರಕರ್ಷ ಪೂರ್ಣವಾದವುಗಳು. ಇವುಗಳ ಐಸಿರಿಯನ್ನು ಬೆಂಗಳೂರು ಬೊಂಬಾಯಿಯಂಥ ಮಹಾ ನಗರಗಳಲ್ಲಿ ನಿತ್ಯ ನಿತ್ಯ ಸಂಕೀರ್ಣ ಸಂಕ್ರಾಂತ ಅಹನ್ಯಹನಿ ಜೀವನ ರಂಗದಲ್ಲಿ ಅನುಭವಿಸಲಾಗುವುದಿಲ್ಲ. ಹಬ್ಬಗಳ ಸಂಕೇತವಾಗಿ ವಿವಿಧ ಭಕ್ಷ್ಯ ಭೋಜ್ಯಗಳಾಗಬಹುದು. ನೂತನ ವಸ್ತ್ರಾಭರಣ ಧಾರಣವೂ ಆದೀತು. ಆದರೆ ನಿಸರ್ಗದ ಮಡಿಲಲ್ಲಿ ಬೆರೆತು ನಿಬ್ಬೆರಗುಗೊಳ್ಳುವ ನಿರ್ಭರಸ್ಥಿತಿಯಾಗಲಿ ಮೂಲೋದ್ದೇಶ ಸಾಫಲ್ಯವಾಗಲಿ ಆಗುತ್ತದೆಂದು ಹೇಳಲಾಗುವುದಿಲ್ಲ.

ಆಶ್ವಯುಜ ಶುದ್ಧ ಪೂರ್ಣಿಮೆಯೇ ಸೀಗೇ ಹುಣ್ಣಿಮೆ. ಇದಕ್ಕೆ 'ಭೂಮಿ ಪೂರ್ಣಿಮಾ' ಎಂದೂ ಕರೆಯುವರು. ಸೀಗೆ ಹುಣ್ಣಿಮೆಗೆ ಭೂಮಿ ತಾಯಿ ಪೂರ್ಣ ಗರ್ಭಿಣಿ ಇವರ ಭಾವನೆಯಲ್ಲಿ! ಎಲ್ಲಿ ನೋಡಿದಲ್ಲಿ ಜೋಳ, ರಾಗಿ ಬತ್ತಗಳು ಕದರು ಹೊಡೆ ಕಪ್ಪು ಹೊಡೆಗಳನ್ನೆತ್ತಿ ಕುತ್ತಿಗೆಗೆ ಆತು ನಿಂತಿರುತ್ತವೆ. ಆ ಸಮಯದಲ್ಲಿ ಭೂಮಿ ದೇವಿಯ ಬಯಕೆ ಸಲ್ಲಿಸಲು ಈ ಹಬ್ಬ. ಒಂದೊಂದು ಹಬ್ಬದಲ್ಲಿ ಒಬ್ಬೊಬ್ಬರಿಗೆ ಪ್ರಾಶಸ್ತ್ಯ. ಈ ಹಬ್ಬಕ್ಕೂ ಮನೆಯ ಮುತ್ತೈದೆ ಮಗಳು ಆವಶ್ಯಕ.

> ಸೀಗೆಹುಣ್ಣಿಮೆ ಹಬ್ಬ ಸಿರಿ ನನ್ನ ಮಗಳಿಗೆ
> ಮಾನವ್ಮಿ ಹಬ್ಬ ಮಗನ್ಹಬ್ಬ |
> ಮಾನವ್ಮಿ ಹಬ್ಬ ಮಗನ್ಹಬ್ಬ ಮುಂದಿರುವ |
> ದೀವಳಿಗಿ ಹಬ್ಬ ಅಳಿಯನದು ||

ಮಹಾನವಮಿ ಹಬ್ಬ ಮಗನ ಪ್ರಾಶಸ್ತ್ಯದಿಂದಲೂ, ದೀವಳಿಗೆ ಅಳಿಯನ ಪ್ರಾಶಸ್ತ್ಯದಿಂದಲೂ, ಸೀಗೆ ಹುಣ್ಣಿಮೆ ಹಬ್ಬ ಮಗಳ ಪ್ರಾಶಸ್ತ್ಯದಿಂದಲೂ ಮುಗಿಯಬೇಕು. ಸೀಗೆ ಹುಣ್ಣಿಮೆ ಬಂದರಾಯಿತು. ಅಡಿಗೆಯ ಸಂಭ್ರಮವೇ ಸಂಭ್ರಮ. ಭೂಮಿ ತಾಯಿ ಬಯಸಿದ ಅಡಿಗೆ ಬುಂಡಿಗಡಬು, ಪುಂಡಿಯ ಪಲ್ಯ, ಕರಚಿಯ ಕಾಯಿ,ಕೋಡಬಳೆ, ಹೂರಣಗಡಬು, ತರಗು,ಚಕ್ಕುಲಿ, ಕಡಲೆಯ ಪಚ್ಚಡಿ, ಇಷ್ಟು ಅಡಿಗೆ ಕಡ್ಡಾಯವಾಗಿ ಆಗಲೇಬೇಕು. ನಸುಕಿನಲ್ಲಿ ಮನೆಯ ಮಗ ಅನ್ನ ಕೆನೆ ಮೊಸರಿನ 'ಚರಗ'ವನ್ನು ಒಯ್ದು ಹೊಲದಲ್ಲಿ 'ಹುಲಿಗಿ' ಎಂದು ಕೂಗುತ್ತ ಎಲ್ಲ ಹೊಲಗಳಿಗೂ ಚಲ್ಲಿ ಬರಬೇಕು. ಬರುವುದರೊಳಗೆ ಮನೆಯಲ್ಲಿ ಅಡಿಗೆ ಸಿದ್ಧವಾಗಿ ಹೆಡಗೆಗಳಲ್ಲಿ ತುಂಬಿರುತ್ತಾರೆ. ಬುಟ್ಟಿಯ ಮೇಲೆ ಈಶ್ವರ, ಬಸವಣ್ಣ, ಐದು ಜನ ಮುತ್ತೈದೆಯರು ಜೋಳದ ಬೆಳೆ ಮೊದಲಾದ ವಿವಿಧ ಚಿತ್ರಗಳು ಬರೆಯಲ್ಪಟ್ಟಿರುತ್ತವೆ ಸುಣ್ಣಬಣ್ಣಗಳಿಂದ. ಮನೆಯ ಮುತ್ತೈದೆ ಮಗಳು ಹೊಸ ಸೀರೆಯನ್ನುಟ್ಟು 'ಹಂಗುನೂಲು'ಧರಿಸಿ ಪ್ರಧಾನ ಬುಟ್ಟಿಯನ್ನು ಹೊತ್ತು ಮಂಗಳಪೂರ್ಣ ಭಾವದಿಂದ ಹೊರಡುವಳು. ಎಲ್ಲರೂ ಹೊಲಕ್ಕೆ ಹೋಗಿ ಹೊಲದ ಮದ್ಯದಲ್ಲಿ ಬೆಳೆದುನಿಂತ ಹೊಲದ ಮಧ್ಯದಲ್ಲಿ ಭೂದೇವಿಯನ್ನು ಪೂಜಿಸಿ ಪಾಂಡವರನ್ನು ಪೂಜಿಸಿ ವಿವಿಧ ಪದ ಪದ್ಯಗಳಿಂದ ಹಾಡಿ ಹರಸಿ ಎಡೆಮಾಡಿ ಭೂಮಿಯಲ್ಲಿ ಮುಚ್ಚುವರು. ಅಂದು ಹೊಲದಲ್ಲಿ ಆರು ಕಲ್ಲುಗಳನ್ನು ಪಾಂಡವರೆಂದು ಪೂಜಿಸಿಟ್ಟ ಕಲ್ಲುಗಳೇ ತಮ್ಮ ಕಣ ಕಟ್ಟಿಯ ಕಾರ್ಯಗಳೆಲ್ಲ ಮುಗಿಯುವವರೆಗೆ ರಕ್ಷಿಸಿಟ್ಟು, ಧಾನ್ಯಗಳನ್ನು ಹಗೆ ಅಥವ ಸಣತಗಳಲ್ಲಿ ಹಾಕಿದ ಮೇಲೆ ಆದರ ಮೇಲಿಟ್ಟು ಮುಚ್ಚುತ್ತಾರೆ

ಹೊಲದ ಆ ನಿಸರ್ಗ ಸೌಂದರ್ಯದ ವಿಪುಲ ಸಂಪತ್ತಿನ ಮಧ್ಯದಲ್ಲಿ ಊಟ ಮಾಡಿ ನಲಿದು ಮನೆಗೆ ಸಾಯಂಕಾಲ ಬರುತ್ತಾರೆ. ಈ ಹಬ್ಬ ಕಳೆದು ಹದಿನೈದು ದಿನಗಳಾದ ಮೇಲೆ ಬರುವ ಹಬ್ಬವೇ ದೀವಳಿಗೆ ಹಬ್ಬ. ಸೀಗೆಹುಣ್ಣಿಮೆಯಲ್ಲಿ ಹಸುರುಡೆಯುಟ್ಟ ಭೂದೇವಿ ದೀವಳಿಗೆಯ ಹೊತ್ತಿಗೆ ಹೊಂಪಾಗಿ ಹೊಂಬಣ್ಣದಿಂದ ಇರುತ್ತಾಳಾದ್ದರಿಂದಲೇ ಇದು ಅರಿಸಿಣ ದೀವಳಿಗೆಯು ಹಬ್ಬ. ಅಥವ ಹಟ್ಟಿಯ ಹಬ್ಬ.

ಮಹಾನವಮಿ ಹಬ್ಬ ಮಗನ ಹಬ್ಬವೆಂದು ತಿಳಿಸಿತಷ್ಟೆ. ಆಶ್ವಯುಜ ಶುದ್ಧ ಪ್ರತಿಪದೆಯಿಂದ ದಶಾಹರ ಪರ್ಯಂತ ಘಟ ಪೂಜೆಯನ್ನು ಮಾಡಿ ಆ ದಿನ ಬೆಳಗಿನ ಜಾವದಲ್ಲಿ ವಿಶೇಷ ಪೂಜಾದಿಗಳನ್ನು ಮಾಡಿ ಘಟವನ್ನು ಕೀಳುವನು. ಘಟದ ವೈಶಿಷ್ಟ್ಯವೊಂದು ಪ್ರಕೃತ ಹೇಳಬೇಕಾದುದು. ಆಶ್ವಯುಜ ಶುದ್ಧ ಪ್ರತಿಪದೆಯ ದಿನ ಮಣ್ಣಿನ ತೆಂಗಿನ ಕಾಯಿಯಿಟ್ಟು ಸುತ್ತಲೂ ಹುತ್ತದ ಮಣ್ಣನ್ನು ತಂದು ಹಾಕಿ ಮಣ್ಣಿನಲ್ಲಿ ತಾನು ಬೆಳೆಯುವ

ಎಲ್ಲ ಕಾಳುಗಳನ್ನು ಕಲಸಿ ನೀರು ಹಾಕಿ ನಂದಾದೀಪ ಮಾಡಿಸಿ ಪೂಜಿಸುತ್ತ ಬರುವನು. 10ನೆಯ ದಿನ ಘಟ ವನ್ನು ಕಿತ್ತು ಅಲ್ಲಿ ಬೆಳೆದು ನಿಂತ ಸಸಿಗಳ ಮೇಲಿಂದ ಮುಂದಿನ ತನ್ನ ಎಲ್ಲ ಬೆಳೆಯ ನಿರ್ಧಾರ ಮಾಡುವನು. ಆ ಸಸಿಗಳೇ ಅಂದು ಮನೆಯ ಎಲ್ಲ ಮುತ್ತೈದೆಯರು ಮುಡಿದುಕೊಳ್ಳುವ ಪವಿತ್ರ ವಸ್ತು. ಆ ಸಸಿಗಳನ್ನೆಲ್ಲ ಊರೊಳಗಿನ ದೇವರಿಗೆ ಏರಿಸುವನು. ಘಟಸ್ಥಾಪನೆ ಮಾಡುವುದರ ಉದ್ದೇಶ ತನ್ನ ಭವಿಷ್ಯದ ಬೆಳೆಯ ಫಲಾ ಫಲಗಳ ನಿಷ್ಕರ್ಷೆಯೆಂದೇ ಅರ್ಥವಾಯಿತು. ಬೆಳಿಗ್ಗೆ ಘಟ ಕಿತ್ತ ಮೇಲೆ ಚರಗದೊಡನೆ ಹೊಲಕ್ಕೆ ಹೋಗಿ ಚರಗಚಲ್ಲಿ ಬನ್ನಿಯ ಮೋಟೆಯನ್ನು ಆ ದಿನವೇ ತಂದು ಪೂಜಿಸುತ್ತ ದೀವಳಿಗೆಯ ದಿನ ಹಟ್ಟಿಯಲ್ಲಿಟ್ಟು ಪೂಜಿ ಸಿದನಂತರವೇ ಮುಂದೆ ತಾನು ಕಣವಲ್ಲಿ ನೆಡುವ ಮೋಟೆಯಾಗಬೇಕು. ಕಣದಲ್ಲಿ ನೆಡುವ ಮೋಟೆಯ ವಿಚಾರದಲ್ಲೂ ಇಷ್ಟು ಕಟ್ಟುನಿಟ್ಟು. ಸಾಯಂಕಾಲ ಶಮಿ ವೃಕ್ಷಕ್ಕೆ ಊರ ಸಕಲರೊಡನೆ ಸೇರಿ ಶಮಿದಲ (ಬನ್ನಿಯ ಪತ್ರ)ವನ್ನು ತಂದು ಅದನ್ನು ಬಂಗಾರವೆಂದು ಗುರುಹಿರಿಯರಿಗೆ ಮಿತ್ರರಿಗೆ ಎಲ್ಲರಿಗೂ ಕೊಟ್ಟು ಬರು ವನು. ಅಂದು ಪರಸ್ಪರ ವಿರೋಧ ವಿದ್ದವರಿಗೂ ಅದನ್ನು ಕೊಡುವುದು ಪದ್ಧತಿ. ಈ ಪದ್ಧತಿಯಿಂದ ವಿರೋಧ ಭಾವ ವಳಿದು ಮಿತ್ರ ಭಾವವಳವಡಲು ಸಹಕಾರಿ. ಶಮಿ ದಲವು ಬಂಗಾರವಾಗುವುದಕ್ಕೆ ಇರುವ ವೈಜ್ಞಾನಿಕ ಕಾರ ಣವನ್ನು ತಿಳಿದವರು ವಿವರಿಸಬೇಕಾಗಿದೆ. ಆ ದಲವು ಅತ್ಯುತ್ಕೃಷ್ಟ ವನಸ್ಪತಿಯೆಂದು ಮಾತ್ರ ಹೇಳಿ ನಾನು ಮುಂದೆ ಸಾಗುತ್ತೇನೆ. ವಿಜಯದಶಮಿಯ ಈ ಹಬ್ಬ ವಿಜಯದ ಸಂಕೇತವೂ ಹೌದು. ವಿಜಯ ಯಾತ್ರೆಗೆ ಹೊರಡುವವರು ಆ ದಿನ ಸುಸಜ್ಜಿತರಾಗಬೇಕು. ಇದು ರಾಜನ ಎರಡಾರ್ಜನೆಗೆ ಸಂಬಂಧಪಟ್ಟ ಪ್ರಶ್ನೆ. ಬನ್ನಿ ಯನ್ನು ವಡಿದು ತೇಜಿಯನ್ನೇರಿ ಮಗ ಮನೆಗೆ ಬಂದಾಗ ಮನೆಯ ಸೊಸೆ ಸಂಭ್ರಮಾದರಗಳಿಂದ ಗಂಡ ನನ್ನೆದುರುಗೊಳ್ಳಬೇಕು. ಬಾಗಿಲಲ್ಲಿ ಆತನಿಗೆ ನಿವಾಳಿ ದೆಗೆಯಬೇಕು ಅಕ್ಕತಂಗಿಯರು ಆರತಿಯೆತ್ತಿ ಹಣೆಗೆ ದಿಟ್ಟಿಬೊಟ್ಟನ್ನಿಡಬೇಕು. ಅಕ್ಷತೆಯ ತಿಲಕವನ್ನು ಇಡ ಬೇಕು—

ಮಾನವನಿ ಬಂತೆಂದು ತುಂಬಿನೆರಡಾರತಿಯ
ಜಾಜು ತುಂಬೇನೆ ಜಗುಲಿಗೆ ।
ಜಾಜು ತುಂಬೇನೆ ಜಗುಲಿಗೆ ಅಣ್ಣನ
ತೇಜಿಗಾರತಿಯ ಬೆಳಗೇನೆ ॥

ಹೀಗೆ ವೈಭವೋಪೇತವಾಗಿ ಪವಿತ್ರ ಭಾವನೆ ಯಿಂದ ನಿಸರ್ಗದೊಡನೆ ನಿಸರ್ಗವಾಗಿ ಬೆಳೆಯುವ ಒಕ್ಕಲು ಮಗ ಮಹಾನವಮಿ, ಸೀಗೆ ಹುಣ್ಣಿವೆ, ದೀಪಾ ವಳಿ ಹಬ್ಬಗಳನ್ನು ಮುಗಿಸುವನು. ದೀಪಾವಳಿ ಹಬ್ಬದ ನಂತರ ಮುಂದೆ ಬರುವ ಯುಗಾದಿಯವರೆಗೆ ಯಾವ ಹಬ್ಬಗಳನ್ನೂ ಇಷ್ಟೊಂದು ವೈಭವದಿಂದ ಆಚರಿಸಲಾರ. ಹಟ್ಟಿಯ ಹಬ್ಬದನಂತರ ಹೊಟ್ಟೆಯ ಹಬ್ಬವೆಂದೇ ಆತನ ಗಾದೆ

## ಮಳಿ ಹೋದಾಗ

ವ್ಯವಸಾಯ ಪ್ರಪಂಚವೆಲ್ಲ ಮಳೆಯ ಆಗಮನ ವಿಷಯದಲ್ಲಿ ಅತ್ಯಂತ ಕುತೂಹಲಕಾರಿ. ಭಾರತ ಪ್ರಾಚೀನ ಧರ್ಮಗ್ರಂಥಗಳಾದ ವೇದಾದಿಗಳಲ್ಲಿ ಮಳೆಯ ಪ್ರಾಪ್ತಿಗೋಸುಗ ತದಧಿದೇವತೆಯನ್ನು ಪೂಜೆ ಮಾಡು ವುದು ಪ್ರಸಿದ್ಧವಿದೆ. ಋಗ್ವೇದದಲ್ಲಿಪರ್ಜನ್ಯಜಪವೊದಲಾ ದುವನ್ನು ಆ ಕಾಲದಿಂದ ಈ ಕಾಲದವರೆಗೂ ಮಾಡುವುದು ರೂಢಿಯಲ್ಲಿದೆ. ವಿಜ್ಞಾನ ಯುಗಕ್ಕೆ ಈ ವಿಚಾರ ಧಾರೆ ಒಪ್ಪಲಿ ಒಪ್ಪದಿರಲಿ, ಆ ಚಿಂತೆಯಲ್ಲಿರುವವರು ಆ ಕಾರ್ಯವನ್ನು ಇಂದೂ ಮಾಡುವುದು ರೂಢಿಯಲ್ಲಿದೆ. ಅಂತೆಯೆ ಈಗಲೂ ಮಳಿ ಹೋದರಾಯಿತು, ಒಕ್ಕಲು ಮಗ ಬಾಯಿ ಬಾಯಿ ಬಿಡುತ್ತಾನೆ. ಮಳೆದೇವನಿಗೆ ಮೊರೆಯಿಡಲು ಹೋಗುತ್ತಾನೆ. ಎಲ್ಲಿಗೆ ಹೋಗಬೇಕು ? ಮಳೆದೇವನಿರುವಲ್ಲಿಗೆ ಅವನು ಹೋಗಲು ಸಾಧ್ಯವೇ ? ಸಮುದ್ರಕ್ಕೆ. ಅರಣ್ಯಕ್ಕೆ ಮೇಘ ಮಂಡಲಕ್ಕೆ ಇವನು ಹೇಗೆ ಹೋಗಲು ಸಾಧ್ಯ. ತನ್ನ ಪ್ರತಿನಿಧಿಗಳನ್ನಾಗಿ ಎರಡು ಗಿಳಿಗಳನ್ನಾರಿಸುತ್ತಾನೆ. ಅವಕ್ಕೆ ಮನದ ಅಳ ಲನ್ನು ತಿಳಿಸಿ ಉಡುಗೊರೆ ಸಮೇತ ಹಾರಿಬಿಡುತ್ತಾನೆ. ಕೆಳಗಣ ಪದ್ಯದಲ್ಲಿ ಆ ಭಾವನೆ ಚೆನ್ನಾಗಿ ವ್ಯಕ್ತಪಟ್ಟಿದೆ. ಹಾಡು ಸುವ್ವಿಯ ಹಾಡು. ಅಂದವಾಗಿಹಾಡಿದರೆ ಚೆನ್ನು.

ಕೆರೆಯಾಗ ಎರೆಹುಟ್ಟಿಎರೆಯಾಗ ಮರಹುಟ್ಟಿ
ಮರದಮೇಲೆರೆಡು ಗಿಳಿಕುಳಿತು ಸುವ್ವಿ ।
ಮರದಮೇಲೆರೆಡು ಗಿಳಿಕುಳಿತು ನುಡಿದಾವು ।
ಕುಳಿತು ನಾವೇನ ಮೆಲುವನ ಸುವ್ವಿ ॥

ಕುಳಿತು ನಾವೇನ ಮೆಲುವನ ಗಿಳಿರಾಮಾ ।
ಸಾಲವಾನೇವು ಒಣಗ್ಯಾವ ಸುವ್ವಿ ॥
ಕುಳಿತಂಥ ಗಿಳಿಗಳು ವೈಮುರಿದು ಎದ್ದಾವು ।
ಹಾರ್‍ಯಾವು ವನದೇವಿ ಸಿರಿಮನೆಗೆ ಸುವ್ವಿ ॥

ಕೆರೆ ಎಲ್ಲ ಎರೆಯಾಗಿ ಮರಹುಟ್ಟಿ ನಿಂತಿವೆ. ಸುತ್ತಣ ಮಾನ್ಯಗಳೆಲ್ಲ ಒಣಗಿರುವಾಗ ತಿನ್ನಲೇನಿಲ್ಲ. ಗಿಳಿಗಳು ವನದೇವತೆಯಲ್ಲಿ ತಮ್ಮ ಸಂಕಟ ಹೇಳಲು ಹೊರಟವು ಬೈಲುಸೀಮೆಗೆ ಮಳೆ ಬರುವ ಪೂರ್ವದಲ್ಲಿ ಮಳೆ ಹಿಂದಿನ ಬೆಟ್ಟದ ಅರಣ್ಯ ಪ್ರದೇಶಗಳಲ್ಲಿ ಪ್ರಾರಂಭ ವಾಗಿ ಪೂರ್ವದ ಕಡೆ ಬರುವುದನ್ನು ಗಮನಿಸಬೇಕು. (ಪಶ್ಚಿಮ ಘಟ್ಟದಲ್ಲಿ ಮಳೆ ಪ್ರಾರಂಭವಾಗಿ ಪೂರ್ವಕೆ ಬರುವುದು ಕರ್ನಾಟಕಕ್ಕೆ ನೈಋತ್ಯ 'ಮಾನ್ಸೂನ್' ಗಾಳಿಗಳ ಪ್ರಭಾವದಿಂದ)

ಅರಣ್ಯದೇವಿಯು ಬಂದ ಗಿಳಿಗಳನ್ನು ಉಪಚರಿ ಸುವಳು—

ಎಂದಿಲ್ಲದ ಗಿಳಿರಾಮಗ ಗಿಂಡಿಲಗ್ಗಣಿ ಕೊಟ್ಟು ।
ಕೂಡಲು ಹಾಕ್ಯಾಳ ಮಣಿಚೌಕ ಸುವ್ವಿ ।
ಕೂಡ್ರಲು ಬಂದಿಲ್ಲವ್ವ ನಿಲ್ಲಲು ಬಂದಿಲ್ಲವ್ವ ।
ತಂದೆ ಮಳೆರಾಯನ್ನ ಕಳುಹವ್ವ ಸುವ್ವಿ ।
ನಿನು ತಂದೆ ಮಳೆರಾಯ ಹೀಗೆ ಬಂದಾನ।
ಹೋಗಿರಿ ಸಿರಿಗಂಗೆಯರ ಮನೆಗೆ ಸುವ್ವಿ ।

ಅರಣ್ಯ ದೇವತೆ ಇಲ್ಲಿ ನಿಮ್ಮ ಮಳೆ ರಾಯನಿಲ್ಲ, ಸಿರಿಗಂಗೆಯ ಅರಮನೆಗೆ ಹೋಗಿರಿ. ಅಲ್ಲಿದ್ದರೆ ಕರೆದು ತನ್ನಿ ಇಲ್ಲಿಯೂ ಆತನ ಸುಳಿವು ಇಲ್ಲ ಎಂದು ಹೇಳಿ ಕಳಿ ಸಿಬಿಡುವಳು. ಅಲ್ಲಿಂದ ಹಾರಿ ಗಿಳಿಗಳು ಸಿರಿಗಂಗೆಯ ಅರಮನೆಗೆ ಹಾರಿಹೋಗುತ್ತವೆ. ಸಿರಿಗಂಗೆಗೆ ತಕ್ಕ ಆಹೇರು ಆಗಬೇಕಲ್ಲವೆ? ಅವನ್ನೆಲ್ಲ ಕಟ್ಟಿಕೊಂಡು ಹಾರುತ್ತವೆ.

ಸರಗಿ ಸಾವಿರನ್ನ ಗಳಿಗಿ ಮುನ್ನೂರನ್ನ
ಸೆರಗಿಲೆ ನವರತುನ ಕೆತ್ತಿರಲೆ ಸುವ್ವಿ ।
ಸೆರಗಿಲೆ ನವರತುನ ಕೆತ್ತಿದಂಥ ಸೀರೆ ।
ದೋತರ ಸೆರಗಾಗ ಕಟ್ಟಿಕೊಂಡು ಸುವ್ವಿ ।
ದೋತರ ಸೆರಗಾಗ ಕಟ್ಟಿಕೊಂಡು ಗಿಳಿರಾಯ ।
ಹೋದನು ಸಿರಿಗಂಗೆ ಅರಮನೆಗೆ ಸುವ್ವಿ ।
ಮಂಚದ ಮೇಲಿರುವ ಸಿರಿಗಂಗಾ ದೇವಿಗೆ ।
ಆಹೇರನು ಮಾಡಿ ಅಳುತಾವ ಸುವ್ವಿ ।

ಸಿರಿಗಂಗಾದೇವಿಯ ಅರಮನೆಗೆ ಹೋದುದೇ ತಡ ಗಿಳಿಗಳಿಗೆ ಅಳುವೇ ಬಂದುಬಿಟ್ಟಿತು. ಸಿರಿ ಗಂಗಾ ದೇವಿಯು ಬಂದ ಗಿಳಿಗಳನ್ನು ಮನ್ನಿಸಿ, ದುಃಖೋಪ ಶಮನ ಮಾಡಿ ಅಳುವ ಕಾರಣ ಕೇಳುವಳು. ಆಗ ಗಿಳಿ ಗಳು ಬಿಕ್ಕಿ ಬಿಕ್ಕಿ ಅಳುತ್ತ—

ಎಂಟೆತ್ತು ಕಟ್ಟ್ಯಾರು ಜೋಡ್ಬಂಡಿ ಹೂಡ್ಯಾರು
ಒಕ್ಕಲುಮಗ ಬಾಯ ಬಿಡುತಾನು ಸುವ್ವಿ ।
ಕಾವಿಯ ಹೊತ್ತಾನು ಕಾವಿಯ ಉಟ್ಟಾನು ।
ಒಕ್ಕಲು ಮಗಬಾಯ ಬಿಡುತಾನ ಸುವ್ವಿ ॥

ಎಂಟೆತ್ತು ಜೋಡು ಬಂಡಿ ಕಟ್ಟಿಕೈತೊಳೆಯಲೂ ನೀರಿಲ್ಲದೆ ಕಾವಿಯ ಬಣ್ಣದ ಬಟ್ಟೆಯುಟ್ಟು ತೊಂದರೆ ಪಡುತ್ತಿರುವ ಒಕ್ಕಲು ಮಗನ ಸ್ಥಿತಿಯನ್ನು ಗಿಳಿಗಳ ಬಾಯಿಂದ ಕೇಳಿ ಸಿರಿಗಂಗಾದೇವಿ ಕರುಣ ಬಂದು ಮಳೆ ರಾಯನಿಗೆ ಆಜ್ಞೆ ಮಾಡಿ ಬಿಡುವಳು. ಮಳೆರಾಯ ರಾಜ್ಯದ ಮೇಲೆ ಹೋಡಲು ಸಿದ್ಧನಾದನು.

ಮಾವಿನ ಮರದಾಗ ಕೂಕ್ಯಾನು ಮಳೆರಾಯ ।
ಸಬ್ಬುಲ ರಾಜ್ಯಕ್ಕೆ ಹೊರಟಾನು ಸುವ್ವಿ ।
ಬೆಳ್ಳಂದು ಉಟ್ಟಾನು ಬೆಳ್ಳಂದು ಹೊತ್ತಾನು ।
ಮಲ್ಲಿಗಿ ಮೊಗ್ಯಾಗ ಅಡಗ್ಯಾನ ಸುವ್ವಿ ।
ಮಲ್ಲಿಗಿ ಮೊಗ್ಯಾಗ ಅಡಗ್ಯಾನ ಮಳೆರಾಜ ।
ಮೂಡಲ ದಿಕ್ಕಿಗೆ ಹೊರಟಾನ ಸುವ್ವಿ ।
ಕೆಂಪಂದು ಉಟ್ಟಾನ ಕೆಂಪಂದು ಹೊತ್ತಾನ ।
ಸಂಪಗಿ ಮೊಗ್ಯಾಗ ಅಡಗ್ಯಾನ ಸುವ್ವಿ ।
ಸಂಪಗಿ ಮೊಗ್ಯಾಗ ಅಡಗ್ಯಾನ ಮಳೆರಾಜ ।
ಸುತ್ತಲ ರಾಜ್ಯಕ್ಕೆ ಹೊರಟಾನಾ ಸುವ್ವಿ ।
ಮುಂದೆಮುಂದೆ ಮಳೆರಾಜ ಹಿಂದಿಂದೆ ಗಿಳಿರಾಮಾ
ತಂದರು ದೇಶಕ್ಕೆ ಮಳೆಯನ್ನು ಸುವ್ವಿ ॥
ಮೇಲಿನ ಪದ್ಯದ ಸೊಗಸು ಸೌಂದರ್ಯ ಕಾವ್ಯದ

ಸೊಗಸುಗಳು ಸೂಕ್ಷ್ಮವಾಗಿ ವಿಚಾರ ಮಾಡತಕ್ಕವುಗಳಾಗಿವೆ. ಮಳೆ ಹೋದಾಗ ಬಹು ಜನರ ಮನೋವ್ಯಥೆಯಲ್ಲಿ ವೈವಿಧ್ಯವಿದೆ. ಮ ಹಾ ನ ಗ ರ ದ ಐಶ್ವರ್ಯ ಭೋಗದ ಬಾಹುಳ್ಯದಲ್ಲಿ ಮುಳುಗಿರುವ ಮನುಷ್ಯ, ವ್ಯವಸಾಯ ಜೀವಿ, ಇವರೀರ್ವರ ತತ್ಸಂಬಂಧವಾದ ವ್ಯಥೆ ತೀರಾ ಭಿನ್ನವಾದುವು. ವ್ಯವಸಾಯಗಾರನ ಸರ್ವಸ್ವ ಮಳೆಯನ್ನವಲಂಬಿಸಿದೆ. ಕುಳಿತರೂ ನಿಂತರೂ ಅವನ ನೋಟ ಮೇಘದಲ್ಲಿ ಆಕಾಶದಲ್ಲಿ.

ಪ್ರಕೃತಿಯ ಕೋಪ ಎಲ್ಲ ಕೋಪಗಳಿಗಿಂತಲೂ ಗರೀಯಸಿಯಲ್ಲವೆ.? ಪ್ರಕೃತಿಯ ಈ ಕೋಪಕ್ಕೆ ಪ್ರಕೃತಿಗೇ ಶರಣು ಹೋಗಬೇಕು. ಮಳೆ ರಾಜನಿಗೆ ಶರಣು ಹೊಕ್ಕಿದ್ದಾನೆ ರೈತಜೀವಿ. ಗಿಳಿಗಳೆರಡರ ಮೂಲಕ ತನ್ನ ಹೃದಯ ದಳಲೆಲ್ಲ ಹೊರಹೊಮ್ಮಿದೆ. ಇಲ್ಲಿ ಗಿಳಿಗಳ ತ್ವರೆ, ವ್ಯಸನ, ದುಃಖ ಇವೆಲ್ಲ ಒಕ್ಕಲುಮಗನವು. ಅವನ ಹೃದ್ಗತ ಬಯಕೆ ಗಿಳಿಗಳ ಕಾರ್ಯದ ಮೂಲಕ ಪರ್ಯವಸಾನಗೊಂಡಿದೆ. ಎಂಟೆತ್ತು ಕಟ್ಟಿದ್ದಾನೆ. ಜೋಡು ಬಂಡಿ ಹೂಡಿದ್ದಾನೆ. ಆದರೇನು ಮಳೆಯಿಲ್ಲದೆ ಏನು ಮಾಡಲು ಸಾಧ್ಯ ? ಒಕ್ಕಲು ಮಗನ ತೊಟ್ಟಬಟ್ಟೆ ತೊನೆಯಲೂ ನೀರಿಲ್ಲ. ಬೆವರುಗೂಡಿ ಹುಡಿಮುಸುಗಿ ಕಾವಿಯಬಣ್ಣವಾಗಿವೆ. 'ನಿನಗಾಗಿ ಬಾಯಿಬಿಡುತ್ತಿದ್ದಾನೆ.' ಎಂದು ಗಂಗಾದೇವಿಯಲ್ಲಿ ಪ್ರಾರ್ಥಿಸಿಕೊಳ್ಳುವುವು. ಮನ ಕರಗಿದ :ಗಂಗಾದೇವಿ ಮಳೆಯನ್ನು ಕಳಿಸಿಯೆ ಬಿಡುವಳು. ಮಾಮರದಲ್ಲಿ ಹೊಕ್ಕು ಮಲ್ಲಿಗಿ ಮೊಗ್ಗಿನಲ್ಲಿ ಅಡಗಿ ಸಂಪಗಿ ವನಕ್ಕೆ ಬಂದು ಬೈಲು ಸೀಮೆಗೆ ಅರಣ್ಯ ಬಿಟ್ಟುಬಂದನೊ ಇಲ್ಲವೊ ಕೆಂದೂಳ ಬಟ್ಟೆಯುಟ್ಟು ಗಭೀರ ಶಬ್ದ ಮಾಡುತ್ತ ರೌದ್ರಾವತಾರದಲ್ಲಿ ಎಲ್ಲ ರಾಜ್ಯಗಳ ಮೇಲೆಬಿದ್ದು ಎಲ್ಲರನ್ನೂ ತಣಿಸುತ್ತಾನೆ. ಮೇಲಿನ ಈ ಪದ್ಯದಲ್ಲಿ ಕಂಡು ಬರುವ ಕಾವ್ಯಗುಣದ ರೀತಿನೀತಿಗಳು ಉತ್ತಮ ಮಟ್ಟದವೆನ್ನಲು ಬೇಕಾದಷ್ಟು ಕಾರಣಗಳಿವೆ. ಓದುಗರೇ ಅದರ ಅನುಭವ ಮಾಡಲೆಂದು ಮಾತ್ರ ತಿಳಿಸಿ ಮುಂದೆ ಸಾಗುತ್ತೇನೆ.

## —ದನಗಳ ಆರೈಕೆ ವಿಚಾರ—

ನಾವೆಲ್ಲ ನೋಡುವಂತೆ ಸಾಮಾನ್ಯವಾಗಿ ಕರೆಯುವ ದನಗಳಿಗೆ ಮಾಡುವ ಆರೈಕೆ ಬರಡು ದನಗಳಿಗಿಲ್ಲ. ಬರಡು ಹ ಸು ವೊ ಂ ದ ರ ಜೊತೆಗೆ ಕರೆಯುವ ಹಸ್ತವೊಂದಿದೆ. ಎರಡಕ್ಕೂ ಇರುವ ಭೇದ ಒಂದು ಕರು ಹಾಕಿದೆ. ಇನ್ನೊಂದು ಇಲ್ಲ. ಇದೂ ಕರುವನ್ನು ಹಾಕಿದ್ದರೆ ಅದರ ಆರೈಕೆಯೂ ಇದಕ್ಕೆ ಆಗುತ್ತಿತ್ತು. ಈ ಭೇದ ಭಾವವನ್ನು ನೋಡಿ ನೋಡಿ ಬರಡು ಹಸು ತಾನೂ ಮಗುವನ್ನು ಪಡೆಯ ಬೇಕು. ಬರಡೆನಿಸಿ ಬರಡು ದಂಟು ಕಡಿದು ಕೋಟಲೆಗೊಳ್ಳುವುದಕ್ಕಿಂತ ಬೇರೆ ನರಕವಿಲ್ಲವೆಂದು ಭಾವಿಸಿ ಶಿವನಲ್ಲಿ ಹೋಗಿ ಮಕ್ಕಳ ಫಲಪಡೆದು ಬರುವ ಗೋವಿನ ಹಾಡೊಂದನ್ನು ಗಮನಿಸಬೇಕು.

ಹಿಂಡುವ ಆಕಳಿಗೆ ಹಿಂಡುಹತ್ತಿಯ ಕಾಳು ।
ಗೋಪೆವ್ವನ ಮುಂದೆ ಬಡದಂಟ ಸುವ್ವಿ ॥
ಗೋಪೆವ್ವನ ಮುಂದೆ ಬಡದಂಟು ಹಾಕ್ಯಾರ ।
ಮನವಾಗ ಗೋಪೆವ್ವ ಮರುಗ್ಯಾಳ ಸುವ್ವಿ ॥
ಗುಡುಗುಡು ಗುಡುಗುತ್ತ ಕೊಂಬನಲ್ಲಾಡಿಸುತ್ತ।
ಹೋದಾಳು ಶಿವನ ಸದರಿಗೆ ಸುವ್ವಿ ॥
ಎಂದಿಲ್ಲದ ಗೋಪೆವ್ವ ಇಂದೇಕೆ ಬಂದೆವ್ವ ।
ಕೂಡ್ರೆ ತಂಗೆವ್ವ ಕೋ ನೀರ ಸುವ್ವಿ ॥
ಕೂಡ್ರಾಕ ಬಂದಿಲ್ಲ ಕುಡಿಯಾಕ ಬಂದಿಲ್ಲ ।
ಮಕ್ಕಳ ಫಲವ ಕೊಡು ಶಿವನೆ ಸುವ್ವಿ ॥

ಶಿವನಿಗೆ ಬಂಜೆಯ ಬಾಳು ಅರಿವಾಯಿತು. ಮಕ್ಕಳ ವರ ಕೊಡುವನು.

ಶಿವರಾಯ ಕರುಣಿಸಿ ಕೊಟ್ಟು ಪೋಗೆನ್ನುತಲಿ ।
ಹಿಗ್ಗಿ ಗೋಪೆವ್ವ ಹೊರಟಾಳು ಸುವ್ವಿ ॥

ಮಕ್ಕಳ ಫಲಪಡೆದು ಗೋಪೆವ್ವ ಬಂದಳು. ಗರ್ಭ ಧರಿಸಿದಳು. ಬಯಕೆಗಳು ಪ್ರಾರಂಭವಾದುವು. ಸುಖದ ದಿನಗಳು ಒಂದೊಂದಾಗಿ ಬರಹತ್ತಿದವು. ಗಬ್ಬದ ಹಸುವಿನ ಆರೈಕೆ ರೈತನಿಂದ ಪ್ರಾರಂಭವಾದುವು.

ಒಂದೆಂಬ ತಿಂಗಳಿಗೆ ಒಂದೇನ ಬಯಸ್ಯಾಳು ।
ಎರೆಯ ಹೊಲದನ್ನ ಎಳೆಗರಿಕೆ ಸುವ್ವಿ ॥
ಎರಡೆಂಬತಿಂಗಳಿಗೆ ಎರಡೇನ ಬಯಸ್ಯಾಳು ।
ತೊ-ರಿಯ ಹೊಲದನ್ನ ಗೊನಿಗಾಯ ಸುವ್ವಿ ॥
ಮೂರೆಂಬತಿಂಗಳಿಗೆ ಮೂರೇನ ಬಯಸ್ಯಾಳು ।
ಎರೆಯ ಹೊಲದನ್ನ ಎಳೆ ಬೆಳಸ ಸುವ್ವಿ ॥
ನಾಲ್ಕೆಂಬ ತಿಂಗಳಿಗೆ ನಾಲ್ಕೇನ ಬಯಸ್ಯಾಳು ।

ಉದ್ದಿನ ಹೊಲದನ್ನ ಬಲಿಗಾಯ ಸುವ್ವಿ ||
ಐದೆಂಬ ತಿಂಗಳಿಗೆ ಐದೇನ ಬಯಸ್ಯಾಳು |
ಕಡಲೆ ಹೊಲದನ್ನ ಬಲಿಗಾಯ ।ಸುವ್ವಿ |
ಆರೆಂಬ ತಿಂಗಳಿಗೆ ಆರೇನ ಬಯಸ್ಯಾಳು |
ಆರಿದ ಅನ್ನ ಕೆನೆಮೊಸರು ಸುವ್ವಿ ||
ಏಳೆಂಬ ತಿಂಗಳಿಗೆ ಏಳೇನ ಬಯಸ್ಯಾಳು |
ಕಾಳುಗುಗ್ಗರಿ ತಿಳಿನೀರ ಸುವ್ವಿ ||
ಎಂಟೆಂಬ ತಿಂಗಳಿಗೆ ಎಂಟೇನ ಬಯಸ್ಯಾಳು |
ಶುಂಠಿಯಾಲಕ್ಕಿ ಪುಡಿಮೆಣಸು ಸುವ್ವಿ ||
ಒಂಬತ್ತು ತಿಂಗಳಿಗೆ ತುಂಬ್ಯಾವು ದಿನಗಳು |
ಬಾಲನ ಈದಾಳು ಗೋಪೆವ್ವ ಸವ್ವಿ ||

ಶಿವನ ಕರುಣಾ ಪೂರ್ಣ ಆಶೀರ್ವಾದದಿಂದ ಪುತ್ರವತಿಯಾದ ಗೋಪೆವ್ವ ಬಂಜೆತನ ನೀಗಿ ಸುಖಿಸಹತ್ತಿದಳು. ಮಗು ದಿನೇ ದಿನೇ ದೊಡ್ಡದಾಗುತ್ತದೆ. ಮಗುವಿಗೆ ಲೋಕಾನುಭವ ಕಡಿಮೆ. ತಾನು ಅಡವಿಗೆ ಮೇಯಲು ಹೋದಾಗ ಬಾಲ್ಯ ಸಹಜ ಚೇಷ್ಟೆಯನ್ನೇ ಸಾಕಿದವರು ತಪ್ಪೆಂದು ತಿಳಿದು ಎಲ್ಲಿ ಶಿಕ್ಷೆಮಾಡುವರೊ ಎಂದು ಭಾವಿಸಿ ಬುದ್ಧಿವಾದ ಹೇಳಲು ಪ್ರಾರಂಭ. ಮಗುವನ್ನು ಪಡೆದುದರಿಂದಲ್ಲವೆ ತಾನು ಸುಖಿಯಾಗಿರುವುದು ?

ಕುಟ್ಟುವ ಒರಳಲ್ಲಿ ಅಕ್ಕಿಯನಿಟ್ಟಾರು
ನೀ ಹೋಗಿ ಬಾಯ ಇಡಬೇಡ ಸುವ್ವಿ |
ನೀನು ಹೋಗಿ ಬಾಯ ಇಡಬೇಡ ಕಂದವ್ವ |
ಕುಟ್ಟುವ ವಣಕೀಲೆ ಹೊಡೆದಾರ ಸುವ್ವಿ ||
ಹಿತ್ತಿಲದಾಗಿರುವ ಹೊಟ್ಟಿನ ಬಣವ್ಯಾಗ |
ನೀಹೋಗಿ ಬಾಯ ಇಡಬೇಡ ಸುವ್ವಿ |
ನೀನು ಹೋಗಿ ಬಾಯ ಇಡಬೇಡ ಕಂದಮ್ಮ |
ಬೀಸುಗೋಲಿಂದ ಬಡೆದಾರು ಸುವ್ವಿ |
ಬೇಲಿ ಮ್ಯಾಲಿನ ಹುಲ್ಲು ಒಪ್ಪಕಂಡಾವೆಂದು |
ಹೋಗಿ ಬಾಯನ್ನು ಇಡಬೇಡ ಸುವ್ವಿ ||
ನೀ ಹೋಗಿ ಬಾಯನ್ನು ಇಡಬೇಡ ಕಂದವ್ವ
ನಾಲಗೆಗೆ ಮುಳ್ಳುತಿವಿದಾವ ಸುವ್ವಿ ||

ಮಗುವಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯ, ಏಕೆಂದರೆ ತಾಯಿ ಇಷ್ಟು ಬುದ್ಧಿವಾದ ಹೇಳುವ ಕಾರಣವೇನು ? ಏಕೆ ? ಎಂಬುದು. ಬಹುಶಃ ಇವಳು ಎಲ್ಲಿಗೋ ಹೋಗುವಳು ಎಂದು ಭಾವಿಸಿ ಮಗು ಕೇಳುತ್ತದೆ. ಈದಮೇಲೆ ಕೆಲವು ದಿನ ಮನೆಯಲ್ಲೇ ಆರೈಕೆಗೊಂಡು ಆಮೇಲೆ ಅಡವಿಗೆ ಮೇಯಲು ಹೋಗಬೇಕಲ್ಲವೆ. ಅಡವಿಗೆ ಹೋಗುವ ಸಮಯದಲ್ಲಿ ಇರುವುದಿಲ್ಲವಾಗಿ ಹೀಗೆ ಹೇಳುತ್ತದೆ.

ಇಷ್ಟೆಲ್ಲ ಹೇಳುತ್ತಿ ನೀನೆಲ್ಲಿಗೆ ಹೋಗುತ್ತಿ |
ನಿನ್ನೊಡನೆ ನಾನು ಬರತೇನಿ ಸುವ್ವಿ ||
ಹೊಡೆಯ ಹುಲ್ಲನು ಮೇದು ಮಡಿಯ
ನೀರನು ಕುಡಿದು |

ತೊಡೆತುಂಬ ಹಾಲತರುತೇನಿ ಸುವ್ವಿ ||
ಕಲ್ಲು ಮುಳ್ಳನು ತುಳಿದು ಅಲ್ಲಿಗೇಕೆ ಬರುತೀದಿ |
ಇಲ್ಲೇ ಮನೆಯಲ್ಲೆ ಇರುಕಂದ ಸುವ್ವಿ ||

ಹೀಗ ಎಷ್ಟು ಹೇಳಿದರೂ ಕರು ಕೇಳಲಿಲ್ಲ. ತಾಯಿಯ ಹಿಂದೆ ಹಿಂದೆ ಅಡವಿಗೆ ಹೊರಟೇ ಬಿಟ್ಟಿತು. ನಿರುಪಾಯದಿಂದ ತಾಯಿ ಕರೆದುಕೊಂಡು ಹೊರಟಳು.

ಮುಂದೆ ಮುಂದೆ ಗೋಪೆವ್ವ ಹಿಂದೆ ಹಿಂದೆ
ಬಸವಣ್ಣ |
ಹೊರಟಾರ ತಮ್ಮ ಅಡವಿಗೆ ಸುವ್ವಿ |
ಹೊಡೆಯ ಹುಲ್ಲನು ಮೇದು ಮಡಿಯ
ನೀರನು ಕುಡಿದು
ಹೊರಟಾರು ತಮ್ಮ ಮನೆಗಾಗಿ ಸುವ್ವಿ ||

ಮಾರ್ಗ ಮಧ್ಯದಲ್ಲಿ ಬರುತ್ತಿರುವಾಗ ಭಯಂಕರ ಸನ್ನಿವೇಶ ಒದಗಿತು. ಪ್ರಾಣಾಪಾಯವೇ ಬಂದೊದಗಿತು ಭಯಂಕರ ರೂಪದ ಹುಲಿ ಎದುರಿಗೆ-

ಗಡಗಡ ಗಡ್ಡಿಸುತ್ತ ಗುಡುಗುಡು ಗುಡ್ಡಿಸುತ್ತ
ಬಂದನು ಹಲಿರಾಯ ಎದುರಿಗೆ ಸುವ್ವಿ ||

ಈ ಭಯಂಕರ ರೂಪದ ಹುಲಿರಾಯನನ್ನು ನೋಡಿ ಹಸುವಿನ ಕೈ ಕಾಲೇ ಏಳದಂತಾದುವು. ಮಗುವನ್ನು ಅಪ್ಪಿಕೊಂಡು ಅಳುವುದಕ್ಕೆ ಪ್ರಾರಂಭವಾಯಿತು. ತಾಯಿಗೆ ಆ ಸಮಯದಲ್ಲಿ ಅಳುವುದನ್ನೊಂದು ಬಿಟ್ಟರೆ ಬೇರೆ ಯಾವ ಉಪಾಯವೂ ತೋರಲಿಲ್ಲ. ಎಷ್ಟೆ ಆಗಲಿ ಶಿವನ ವರಪ್ರಸಾದದ ಕರುವಲ್ಲವೆ ? ಸಂಸ್ಕಾರ

ಪೊಡ್ಡದು. ತನ್ನ ಎಳೆಯ ದನಿಯಿಂದಲೆ ಹುಲಿಗೆ—

> ನಮ್ಮಮ್ಮ ಬಲಿಗಾಯಿ, ನಾನೊಂದು
> ಎಳೆಗಾಯಿ ।
> ಇಬ್ಬರನ ನುಂಗು ಹುಲಿರಾಯ ಸುವ್ವಿ
> ಎಳೆಕಂದ ಬಸವಣ್ಣ ಸುಳಿಯಂತೆ ಬೆಳೆದೀಯ ।
> ನಿಮ್ಮ ತಾಯಿ ಸಾಕು ನೀ ಬಾಳು ಸುವ್ವಿ ॥
> ತಾಯಿ ಇಲ್ಲದ ಮೇಲೆ ನಾನೆಲ್ಲಿ ಬದುಕಲಿ ।
> ನಾನೊಂದು ಗುಕ್ಕು ಹುಲಿರಾಯ ಸುವ್ವಿ ।
> ಮಾತನ್ನು ಕೇಳುತ್ತ ಮನಗರಗಿ ಹೋದಾವು ।
> ತಾಯಿಗೆ ಮಗನಾಗಿ ಇರುಹೋಗು ಸುವ್ವಿ ॥
> ಕೊಂಬನಲ್ಲಾಡಿಸುತ ಕೊಳಗನಲ್ಲಾಡಿಸುತ ।
> ಬಂದಾರು ತಮ್ಮ ಮನೆಗಾಗಿ ಸುವ್ವಿ ॥

ಮೇಲಿನ ಪದ್ಯದಿಂದ ಹಸುವಿನ ಕೊರಗು, ಪುತ್ರಾಪೇಕ್ಷೆ, ಶಿವನ ಕಾರುಣ್ಯ ಪುತ್ರಫಲ, ಅದರ ಜೋಪಾನ ಕ್ರಮ, ಬುದ್ಧಿವಾದ ಕ್ರರುವಿನ ಮಾತು ಸಹುದಿಂದ ಕೂಡಿವೆ. ದಿನದಿನದ ಜೀವನದಲ್ಲಿಯ ಸ್ಪಷ್ಟ ಚಿತ್ರವಿದೆ. ನೀತಿಯಿದೆ, ವಿನಯವಿದೆ, ನಿಷ್ಠೆಯಿದೆ, ಹಿರಿಯರು ಹೊಲಕ್ಕೆ ಹೋಗುವಾಗ ಚಿಕ್ಕ ಮಕ್ಕಳು ಮಾಡುವ ರಂಬಟತನದ ನೆನಪು ಬರುತ್ತದೆ. ಅವರನ್ನು ಹೊಲಕ್ಕೆ ಕರೆದುಕೊಂಡು ಹೋಗಿ ಅಪಾಯವಿಲ್ಲದೆ ಮನೆಗೆ ಕರೆದುಕೊಂಡು ಬರುವ ಜೀವನದ ಚಿತ್ರಣವಿದೆ. ದನುವಿಗೆ ಬಯಕೆಗಳಾಗುವ ವಸ್ತುಗಳ ಚಿತ್ರಣವಂತೂ ತುಂಬ ಸುಂದರ. ಎಳೆಗುಕೆ, ತೊಗರಿಯ ಗೊನಿಗಾಯಿ, ಎಳೆಬೆಳಸಿ, ಬುದ್ದಿಸ ಬಲಿಗಾಯಿ, ಕೆನೆಮೊಸರು ಆರಿದ ಅನ್ನ, ಕಾಳುಗುಗ್ಗರಿ, ತಿಳಿನೀರು ಯಾಲಕ್ಕಿಮೆಣಸು ಒಂದೊಂದೂ ಪ್ರಮೋದ ವಸ್ತುಗಳೇ ದನಗಳಿಗೆ ಬಂಜೆಯಾಗಿದ್ದಾಗ ಇವನ್ನು ಕಾಣಬೇಕೆಲ್ಲಿ ? ಎರೆಯ ಹೊಲದ ಸಮಸ್ತ ಸಂಪತ್ತು ಈ ಬಯಕೆಯ ವಸ್ತುಗಳ ಮೂಲಕ ನಮ್ಮ ಕಣ್ಣೆದುರಿಗೆ ಕಟ್ಟುತ್ತದೆ. ಹುಲಿಯ ಕೈಗೆ ಸಿಕ್ಕಾಗ ಎಳೆಯ ಮಗುವಿನ ದೈನ್ಯದ ಮಂಜುಳಧ್ವನಿಯಿಂದ ಹೇಳುವ "ನಾನೊಂದು ಎಳೆಗಾಯಿ ತಾಯಿಯೊಂದು ಬಲಿಗಾಯಿ ಇಬ್ಬರನ್ನು ನುಂಗು" ಎನ್ನುವುದು ಹುಲಿಯ ಮರ್ಮವನ್ನು ಭೇದಿಸುತ್ತದೆ. ಈ ಎರಡು ಪ್ರಾಣಿಗಳಲ್ಲಿ ಯಾರು ಉಳಿದರೂ ಸುಖವಿಲ್ಲ ತಾಯಿ ಸತ್ತುಹೋದರೆ ಕರುವಿಗೆ ತೊಂದರೆ, ತಬ್ಬಲಿತನ, ಕರು ಸತ್ತರೆ ಜೊತೆಗೆ ತಾಯಿಯ ಸುಖವೂ ಸತ್ತುಹೋಗುತ್ತದೆ.

ಮೇಲಿನ ಕೆಲವು ಜಾನಪದ ಗೀತೆಗಳ ಸಮಾಲೋಚನೆಯಿಂದ ಕಂಡುಬರುವ ಮುಖ್ಯಾಂಶ ಆ ಕವಿಗೆ ತನ್ನ ಜೀವನವನ್ನೇ ಕಾಣಿಸಿಕೊಳ್ಳಬೇಕೆಂಬುದು. ಪದ್ಯಗಳಲ್ಲಿ ಪ್ರಾಸವಿಲ್ಲದಿರಲಿ ವ್ಯಾಕರಣಾಂಶ ಕೆಟ್ಟಿರಲಿ. ಅಲ್ಲಿ ಮುಖ್ಯವಾಗಿ ಗ್ರಾಮಾಂತರ ಜೀವನವೇ ಕಾರ್ಯವಾಗಿದೆ. ಜೀವನಪ್ರತಿ ಬಿಂಬಿಸಲು ಕಾವ್ಯವಲ್ಲವೆ ? ಎಲ್ಲಿ ಜೀವನವೇ ಕಾವ್ಯವಾಗಿದೆಯೊ ಅಲ್ಲಿ ಶಾಸ್ತ್ರನಿಯಮ ಸಡಿಲಾದರೂ ತಡೆದೀತಲ್ಲವೆ ? ಎಷ್ಟೋ ಕಟ್ಟುಪಾಡುಗಳಿಗೊಳಗಾಗಿ ರಸಜೀವನ ಪ್ರತಿಬಿಂಬಿತವಾಗದಿದ್ದರೆ ಅದು ಉತ್ತಮ ಕಾವ್ಯವಾಗಲಾರದು. ದನಗಳನ್ನು ಎಲ್ಲವನ್ನೂ ಸರಿಯಾಗಿ ಆರೈಕೆ ಮಾಡಬೇಕು. ಬರಡೆಂದು ತಾತ್ಸಾರ ಕೂಡದು. ಅದಕ್ಕೂ ಜೀವವಿದೆ—ಇತ್ಯಾದಿ ಅಂಶಗಳು ಮೇಲಿನ ಪದ್ಯದಲ್ಲಿ ವ್ಯಕ್ತಪಟ್ಟಿವೆ. ಇಂದಿನ ನಿತ್ಯಸತ್ಯ ಸಂಕೀರ್ಣ ಜೀವನದಲ್ಲಿ ಒಂದೆರಡು ತಲೆಮಾರಿನ ಹಿಂದಿದ್ದ ಜಾನಪದಗೀತೆಗಳ ಸೌಂದರ್ಯವೇ ಮಾಯವಾಗುತ್ತಿದೆ. ಅದು ಬಲವಾಗುತ್ತ ನಡೆದಿದೆ. ಲಯ, ದಾಟಿ, ರಾಗ ತಾಳಗಳು ಮಾಯವಾಗುತ್ತಿವೆ. ನೂತನ ಮನ್ವಂತರದ ಅಶ್ರದ್ಧಾಮಯ ಜೀವನ ಅಲ್ಲಿಯೂ ಧೀಂಕಿಟ್ಟಿದೆ. ವ್ಯವಸಾಯದಲ್ಲಿನ ಪ್ರೀತಿ ವಿಶ್ವಾಸಗಳು ಬಲಿತರೆ ನಾಡು ಸುಖಿಸೀತು. ಅದಿಲ್ಲದೆ ನಾಡು ಅನ್ನಬಟ್ಟೆಗಾಗಿ ಪರಾವಲಂಬನ ಮಾಡಿದರೆ ತನ್ನ ಕಾಲ ಮೇಲೆ ತಾನೇ ಕಲ್ಲಿಟ್ಟುಕೊಂಡಂತಾಗುತ್ತದೆ. ಅಲ್ಲಿ ಶ್ರದ್ಧಾ ಭಕ್ತಿ ವಿಶ್ವಾಸಗಳು ಕಡಿಮೆಯಾಗಲು ಕಾರಣಗಳೂ ಅನೇಕವಿವೆ. ಸದೃಢಾರೋಗ್ಯ ಸಂಪಾದನೆಯಾಗದೆ ವ್ಯವಸಾಯ ವೃತ್ತಿ ಸುಗಮವಾಗದು. ಸದೃಢಾರೋಗ್ಯ ಸಂಪಾದನೆಯಾಗಲು ಅನ್ನಬಟ್ಟೆಗಳ ಸಮಸ್ಯೆ ಬಗೆಹರಿಯಬೇಕು. ಇವೆರಡೂ ಒಂದೊಂದಕ್ಕೆ ಪೂರಕಗಳು. ತತ್ಸಂಬಂಧವಾದ ದೃಷ್ಟಿಯನ್ನು ಲೋಕ ಪಟುಗೊಳಿಸಿಕೊಳ್ಳುವ ಕಾಲವೀಗ ಸನ್ನಿಹಿತವಾಗಿದೆ. ಈ ವಿಷಯವೀಗ ಅಪ್ರಕೃತ. ಗ್ರಾಮ ವೃದ್ಧವೃದ್ಧೆಯರ ಬಾಯಿಂದ ಬರುವ ಹಾಡು, ಕಥೆ, ಕವನಗಳು ಮೂಲ ತಾಲ ಲಯಬದ್ಧವಾಗಿ ಸಂಗ್ರಹಿಸಲ್ಪಟ್ಟರೆ ಸಾಹಿತ್ಯ ಪ್ರಪಂಚದ ಮೇಲೆ ಹೊಸ್ಮಬೆಳಕು ಬಿದ್ದೀತು. ಅವುಗಳ ಅಂತಸ್ಸತ್ವ ಭಾಷೆಯಲ್ಲಿ ಸಿಕ್ಕದಿದ್ದರೂ ಭಾವದಲ್ಲಿ ಸಿಕ್ಕು

ತ್ತದೆ. ತಾಲ ಲಯದಲ್ಲಿ ಕರ್ಣರಸಾಯನ. ಮನಕ್ಕೆ ಆಪ್ಯಾಯಮಾನ. ಜನಜೀವನಕ್ಕೆ ಇದೊಂದು ಜೀವನ ರಾಸಾಯನ.

ಕೊನೆಯದಾಗಿ ಈ ಕೆಳಗಿನ ಕೆಲವು ಜಾನಪದ ಗೀತೆಗಳ ಮಾರ್ಮಿಕ ಭಾವದ ಬೆಡಗನ್ನು ರಸರುಚಿಯ ವಿಚಾರವನ್ನು ಗಮನಿಸಿದರೆ ಆ ಸಾಹಿತ್ಯದಲ್ಲಿನ ಘನತೆ ಇನ್ನೂ ಗೊತ್ತಾದೀತು. ಬಂಜೆತನಲೋಕದಲ್ಲಿ ನೈಷ್ಠುರ್ಯದ್ದು. ಲೋಕ ಅದನ್ನು ಕಾರುಣ್ಯ ದೃಷ್ಟಿಯಿಂದ ನೋಡಬೇಕಲ್ಲವೆ ?

ಬಂಜೆ ಬಾಗಿಲ ಮುಂದ ಬಂಗಾರದೊಳಕಲ್ಲು ।
ಬಂದು ಕುಟ್ಟ್ಯಾಕ ಸೊಸೆಯಿಲ್ಲ ।
ಬಂದು ಕುಟ್ಟ್ಯಾಕ ಸೊಸೆಯಿಲ್ಲ । ಮಾಸಾಮಿ ।
ಬನ್ನಿ ಮುಡಿಯಾಕ ಮಗನಿಲ್ಲ ॥

ಬಂಜೆಯಾಗಿರುವವಳು ಎಷ್ಟೇ ಶ್ರೀಮಂತಳಾದರೂ ಏನು ಫಲ ? ಅವಳ ಬಾಗಿಲಲ್ಲಿ ಬಂಗಾರದ ಒಳಕಲ್ಲು ಇದ್ದೀತು. ಕುಟ್ಟುವ ಸೊಸೆ ಎಂಬುವಳೇ ಅವಳಿಗಿಲ್ಲ. ಬನ್ನಿಮುಡಿಯಲು ಮಗನಿಲ್ಲ !

ಬಾಲಕರಿಲ್ಲದ ಬಾಲಿದ್ಯಾತರ ಜಲ್ಮ ।
ಬಾಡಿಗೆಯೆತ್ತು ದುಡಿದಂಗ ।
ಬಾಡಿಗೆ ಎತ್ತು ದುಡಿದಂಗ । ಬಾಳೆಲೆಯ ।
ಹಾಸ್ಯುಂಡು ಬೀಸಿ ಒಗೆದ್ಹಂಗ ॥

ಇಲ್ಲಿನ ಉಪಮಾನ ಬಹು ಮನೋಹರವಾದುದು. ಬಾಳೆ ಎಲೆ ತರುವಾಗ ಅದಕ್ಕೆ ನಾವು ಕೊಡುವ ಗೌರವವೆಷ್ಟು. ಅದನ್ನು ಹಾಸಿ ಊಟ ಮಾಡುವಾಗಿನ ಶ್ರದ್ಧೆ ಏನು ? ಆದರೆ ಊಟ ಮಾಡಿ ಮುಗಿದ ಮೇಲೆ ಅದನ್ನು ನಾವು ಕಾಣುವುದು ಹೇಗೆ ? ಈ ವಿಚಾರ ಮನದಂದರೆ ಅಯ್ಯೋ ಪಾಪ ! ಎನ್ನಿಸುತ್ತದೆ. ಆಗ ಅದು ಚರಂಡಿಯ ಸೊತ್ತು. ಹಾಗೆಯೆ ಬಾಡಿಗೆ ಎತ್ತು; ಇವೆರಡೂ ಬಂಜೆ ಜೀವನಕ್ಕೆ ಕೊಟ್ಟ ಉಪಮಾನಗಳು.

ಬಂಜಿ ಬಾಗಿಲ ಮುಂದೆ ಅಂಜೂರಿ ಮರಹುಟ್ಟಿ ।
ಟೊಂಗೆ ಟೊಂಗೆಲ್ಲ ಗಿಳಿಕುಳಿತು ।
ಟೊಂಗೆ ಕೊಂಗೆಲ್ಲ ಗಿಳಿ ಕುಳಿತು । ನುಡಿದಾವು ।
ಬಂಜಿ ನಿನ ಬದುಕು ಹೆರವರಿಗೆ ॥

ಮಕ್ಕಳಿದ್ದಿದ್ದರೆ ಅಂಜೂರಿ ಮರದಲ್ಲಿ ಹಣ್ಣು ಉಳಿಯಲು ಅವಕಾಶವೇ ಇರುತ್ತಿರಲಿಲ್ಲ. ಕಾಯಿ, ದೋರೆ ಹಣ್ಣು ಮೊದಲಾದುವು ಮಕ್ಕಳ ಚಾಪಲ್ಯದಿಂದ ಮುಗಿದೇ ಹೋಗುತ್ತಿದ್ದವಲ್ಲವೆ ? ಈ ರೀತಿ ಇರುವ ಬಂಜೆ ಲೋಕದ ಕಣ್ಣಿಗೆ ಬಂಜೆಯೆಂಬ ನಿಷ್ಠುರದ ನುಡಿ ಕೇಳುವುದಕ್ಕಿಂತ ಮಣ್ಣಾಗಿದ್ದರೇ ಒಳ್ಳೆಯದಾಗಿತ್ತು ಎಂದು ಭಾವಿಸುತ್ತಾಳೆ.

ಹೆಣ್ಣು ಆಗೋದಕಿಂತ ಮಣ್ಣು ಆಗೋದು ಲೇಸು ।
ಮಣ್ಣಿನ ಮೇಲೆ ಮರವಾಗಿ ।
ಮಣ್ಣಿನ ಮೇಲೆ ಮರವಾಗಿ ಹುಟ್ಟಿದರ ।
ಬಂದವರಿಗೆಲ್ಲ ನೆರಳಾಗೆ ॥

ಮಕ್ಕಳು ದಾಂಪತ್ಯ ಪ್ರೇಮದ ಗಂಟು ಎಂದು ಭವಭೂತಿಯ ಅಭಿಪ್ರಾಯ. "ಬಾಲಕರಾಡದಂಗಳಂ ಮಂಜುಳನೆ" ಎಂದು ಷಡಕ್ಷರ ಮಹಾಕವಿ ಹೇಳಿದ್ದಾನೆ. ಮಕ್ಕಳಿಲ್ಲದೆ ಗೃಹಸ್ಥ ಜೀವನ ಪರಿಪೂರ್ಣವಾಗಿರಲಾರದು. ದಾಂಪತ್ಯದ ಚರಮ ಫಲ ಸತ್ಸಂತಾನ.

ಕೂಸು ಇದ್ದವರ ಮನೆಗೆ ಬೀಸಣಿಗಿ ಏತಕ್ಕೆ ।
ಕೂಸುಕಂದವ್ವ ಹೊಳಹೊರಗೆ । ಆಡಿದರೆ ।
ಬೀಸಣಿಗಿ ಗಾಳಿ ಸುಳಿದಾವ ॥
ತವರೂರಿಗೆ ಹೋದರ ನವಿಲು ಬಣ್ಣದ ಹಕ್ಕಿ ।
ತಲೆಬೇನೆಯಿದ್ದು ಅಳುಕಿತ್ತು । ಕಂದನ ॥
ಚೆಲುವಿಕೆ ನೋಡಿ ನಗುತ್ತಿತ್ತು ॥
ಅದಿಏಾ ಯೆನಕಂದ ಅಂಗಾಲು ತೊಳದೇನು ।
ತೆಂಗಿನ ಕಾಯಿ ತಿಳಿ ನೀರು । ತಕ್ಕೊಂಡು ।
ಬಂಗಾರದ ಪಾದ ತೊಳದೇನು ॥
ಯಾತ ಯಾತರ ಗಾಳಿ ಎಳೆಯ ತೋಟದ ಗಾಳಿ ।
ಸುತ್ತಲು ಗಾಳಿ ಸುಳಿಗಾಳಿ । ನನ್ನಯ್ಯಾ ॥
ತೊಟ್ಟಿಲ ಗಾಳಿ ಮನೆ ತುಂಬ ॥
ಅಳುವ ಕಂದನ ತುಟಿ ಹವಳದ ಕುಡಿ ಹಂಗ ।
ಕುಡಿಹುಬ್ಬು ಬೇವಿನ ಎಸಳ್ಹಂಗ । ಕಣ್ನೋಟ ।
ಶಿವನ ಕಯ್ಯಲಗು ಹೊಳೆದಂಗ ॥

ಕಂದಯ್ಯಾ ಅತ್ತರೆ ಕಣಗಿಲು ಕಾತಾವ ।
ಒಣಗಿದ ಬಾಳಿ ಚಿಗುತಾವು, ಕೊಟ್ಟಿಗೆಯ ।
ಬರಪಾಕಳೆಲ್ಲ ಹಯನಾಗೆ ॥

ಸತಿಪತಿಗಳ ಸಂಬಂಧ ಮತ್ತು ಶೃಂಗಾರದ ಸಪ್ರತಿಪಾದಕ ಸಾಹಿತ್ಯ ಇಲ್ಲಿ ಬಹು ಗಂಭೀರ ಮತ್ತು "ಸದ್ಯಃ ಪರ ನಿರ್ವೃತಿ" ಜನಕವಾದುದು—ಎಂಬಂಶಕ್ಕೆ ಕೆಳಗಣ ಪದ್ಯಗಳು ಉತ್ತಮ ನಿದರ್ಶನಗಳು.

ಕಮಲದ ಹೂನಿನ್ನ ಕಾಣದಲಿರಲಾರೆ ।
ಮಲ್ಲಿಗಿ ಮಾಲೆ ಬಿಡಲಾರೆ । ಕೇದಿಗಿ ।
ಗರಿ ನಿನ್ನ ಅಗಲಿ ಇರಲಾರೆ ॥

ತವರು ಮನೆಗೆ ಹೋದರೆ ನಾನು ಒರ್ವನೆ ಇರಲಾರೆ. ಕಮಲದ ಹೂವಿನಂತೆ ನಗುಮುಖ. ಮಲ್ಲಿಗೆ ಹೂವಿನಂತಹ ಮೈಗಂಪು. ಕೇದಗಿಯಂತೆ ಬಳ್ಳುವ ನಯನ ಮನೋಹರ ಲತಾಂಗಿಯನ್ನು ಅಗಲಿ ಇರುವುದಾದರೂ ಹೇಗೆ ಸಾಧ್ಯ? ಅವಳಾದರೊ ಗಂಡನ ಸಂಬಂಧವನ್ನು ಬಿಟ್ಟು ತವರಿಗೆ ಹೋಗಲೂ ಸಾಧ್ಯವಿಲ್ಲ. ಇಲ್ಲಿರಲೂ ಸಾಧ್ಯವಿಲ್ಲ. ಈ ಇಬ್ಬಗೆಯ ಆಕರ್ಷಣೆಗೊಳಗಾಗಿ "ನಯಯಾನತಸ್ಥಾ" ಎನ್ನುವಂತಾಗಿದ್ದಾಳೆ—

ಹಚ್ಚಡದ ಪದರಾಗ ಅಚ್ಚಮಲ್ಲಿಗಿ ಹೂವ ।
ಬಿಚ್ಚಿ ನನ ಮೇಲೆ ಒಗೆದಂಥ । ರಾಯರ್‍ನ ॥
ಬಿಟ್ಟ್ಯಾಂಗ ಬರಲೇ ಹಡೆದವ್ವ ॥
ಹಾಸಿಗೆ ಹಾಸೆಂದ ಮಲ್ಲಿಗಿ ಮುಡಿಯೆಂದ ।
ಬೇಸತ್ತ ಮಡದಿ ಮಲಗೆಂದ । ಬೇಸತ್ತ ಮಡದಿ
ಮಲಗೆಂಬ । ರಾಯನ್ನ ।
ಹೇಗೆ ಬಿಟ್ಟು ಬರಲೇ ಹಡೆದವ್ವ ॥

ಒಮ್ಮೊಮ್ಮೆ ತವರಿಗೆ ಹೋಗುವಾಗಿನ ಗಂಡ ಹೆಂಡಿರ ಒರಟುತನವನ್ನೇನೂ ಮರೆಮಾಚಿಲ್ಲ. ಒಮ್ಮೆ ತವರಿಗೆ ಹೋಗುವ ಹಂಬಲ ಹೆಣ್ಣಿಗೆ ಆವಕಾರಣದಿಂದಲೊ ಬೇಡವೆಂದ ಗಂಡ. ಬಳಿತದಲ್ಲಿ ಪರ್ಯವಸಾನ. ಪುನಃ ಕನಿಕರ

ಮಡದಿಯ ಬಡಪಾನ ಮನಸಾಗಮರುಗ್ಯಾನ ।
ಒಳಸ್ಯ್ಹೋಗಿ ಸೆರಗ ಹಿಡಿವುತ, ಕೇಳ್ಯಾನ ।
ಸಾಹಿಜೆಕ್ಟಿ ನಿನ್ನ ತವರ್‍ಣೆಜೆಕ್ಟಿ ॥
ಕೋಪ ಕನಿಕರಗಳೆರಡು ಭಾವಗಳನ್ನು ಒಂದೇ ತ್ರಿಪದಿಯಲ್ಲಿ ಸಂಗಮಗೊಳಿಸಿದ ಈ ಹಾಡುಗಾರನ ಸಹಜ ಕವಿತ್ವಕ್ಕೇನು ಬೆಲೆಕಟ್ಟೋಣ? ಗಂಡನು ಒಮ್ಮೆ ಒಮ್ಮೆ ವಾಮಮಾರ್ಗ ಗಾಮಿಯಾದಾಗ ಹೆಂಡತಿ ಅದನ್ನು ಎಂಥ ಕ್ಷಮಾ ಶೀಲತೆಯಿಂದ ಎದುರಿಸುವಳೆಂಬುದನ್ನು ಈ ಕೆಳಗಣ ಪದ್ಯದಲ್ಲಿ ಕಾಣಬಹುದು.

ಚಿಂತಾಕು ಇಟುಕೊಂಡು ಚಿಪ್ಪಾಡಿ ಬಳಿವಾಕೆ ।
ಚಿಂತೆಯಿಲ್ಲೆನೆ ನಿನಗಷ್ಟು । ನಿನರಾಯ ।
ಅಲ್ಲೊಬ್ಬಳ ಕೂಡ ನಗುತಾನ ॥

ಈ ಮಾತು ಹೆಂಡತಿಯಾದವಳಿಗೆ ಕರ್ಣಕಠೋರ. ಸಹ್ಯವಲ್ಲ. ಆದರೂ ಕ್ಷಮೆಯ ಪರಾಕಾಷ್ಠವೇ ಅವಳ ಬಾಯಿಂದ. ಅಥವ ಚಹಡಿ ಹೇಳುವವಳು ನಿಜಹೇಳುವಳೊ ಸುಳ್ಳುಹೇಳುವಳೊ ಹೇಗೆ ಗೊತ್ತು? ಅವಳಿಗೆ ಉತ್ತರ ಕೊಡುವುದನ್ನು ಗಮನಿಸಿ.

ನಕ್ಕರುನಗಲೆವ್ವ ನಗೆಮುಖದ ಕೇದಗಿ ।
ನಾಮುಟ್ಟ ಮುಡಿದ ಪರಿಮಳದ । ಹೂವನ್ನು ।
ಅವಳೊಂದುಗಳಿಗಿ ಮುಡಿಯಲೆ ॥
ಗಂಡಪಂಡಿತರಾಯ ಕಂಡಂಗೆ ಆಡಿದರೆ ॥
ಭಂಡಮಾಡುವರ ಮಗಳಲ್ಲ । ಕೊರಳನ್ನ ॥
ಗುಂಡುಬೇಡಿದರೂ ಕೊಡುವೆನೆ ॥

ಕುಲೀನ ಸ್ತ್ರೀಗಲ್ಲದೆ ಈ ಕ್ಷಮೆ ಮತ್ತಾರಿಗೆ ಸಾಧ್ಯ? ಈ ಕರ್ಣ ಕಠೋರ ಸುದ್ದಿಯನ್ನು ಕೇಳಿ ಭಂಡ ಮಾಡಿದರೆ ಫಲವೇನು? ಮರ್ಯಾದೆದಪ್ಪಿ ಗಂಡ ಆಡಿದರೂ ಅದನ್ನು ರಕ್ಷಣೆ ಮಾಡುವುದು ಕ್ಷಮಾಶೀಲಳೂ, ಸಹನ ಶೀಲಳೂ ಆದ ಹೆಣ್ಣು ಮಗಳ ಕರ್ತವ್ಯ. ವಿರೋಧಿಸಿ ಗಂಡನ ಈ ಅಕ್ರಮವನ್ನು ತಡೆಗಟ್ಟಲಾಗುವುದಿಲ್ಲ.

ಹೆಣ್ಣುಮಗಳು ಪ್ರಥಮತಃ ಗಂಡನ ಮನೆಗೆ ಹೋಗುವಾಗ ಅವಶ್ಯ ಕೆಲವು ಬುದ್ಧಿವಾದ ಹೇಳಬೇಕೆಂದು ಎಲ್ಲರ ಮತ. ಕಾಳಿದಾಸನು ಶಾಕುಂತಲದಲ್ಲಿ ಸದ್ಗೃಹಿಣಿ ಯಾರು ?-ಎಂಬ.ಬಗ್ಗೆ ಹೀಗೆ ಹೇಳುತ್ತಾನೆ.

ಶುಶ್ರೂಷಸ್ವ ಗುರೂನ್‌ಕುರುಪ್ರಿಯ ಸಖೀವೃತ್ತಿಂ
ಸಪತ್ನೀಜನೇ ।

ಭರ್ತುರ್ವಿಪ್ರಕೃತಾಪಿ ರೋಷಣತಯಾ
ಮಾಸ್ಮಾಪ್ರತೀಪಂಗಮಃ ।
ಭೂಯಿಷ್ಠಂ ಭರ ದಕ್ಷಿಣಾ ಪರಿಜನೇ
ಭಾಗ್ಯೇಷ್ವನುತ್ಸೇಕಿನೀ ।
ಯಾಂತ್ಯೇವಂ ಗೃಹಿಣೀಪದಂ ಯುವತಯೋ
ವಾಮಾಃ ಕುಲಸ್ಯಾಧಯಃ ॥

ಇನ್ನು ಅನೇಕ ಮಾತುಗಳನ್ನು ಹೇಳುತ್ತಾನೆ. ಜಾನಪದ ರಸಋಷಿಗಳಾದರೊ—

ಅತ್ತೆಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ಆಳುವ ದೊರೆಗಂಜಿ । ಕಂದವ್ವ ।
ಮುತ್ತಾಗಿ ಬಾಳಿ ಬದುಕವ್ವ ॥

ಮನೆಯ ಶಾಸನ ರಾಜ್ಯ ಶಾಸನಗಳೆರಡೂ ಮುರಿಯತಕ್ಕದಲ್ಲ. ಅವಶ್ಯ ಪಾಲಿಸಲ್ಪಡಬೇಕಲ್ಲವೆ ಸತ್ಪ್ರಜೆಗಳಿಂದ.

ಬಾಳುವೆ ಮಾಡಿದರೆ ಬಾತಂಗಿಯೆಂದಾರು ।
ಬಾಳುವೆಗೆಟ್ಟು ಮತಿಗೆಟ್ಟು । ಬಾಳಿದರೆ ।
ಹೆತ್ತವರ ಕುಲಕೆ ಹಗೆಯಾದೆ
ಅತ್ತೆಯ ಮನೆಯಾಗದೆ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರು ಉಣಬೇಕು । ತವರಿಗೆ ।
ಉತ್ತಮದ ಹೆಸರು ತರಬೇಕು ॥
ಎಳೆಗರು ಎತ್ತಲ್ಲ ದಳವಾಯಿ ದೊರೆಯಲ್ಲ ।
ಮನೆಗೆ ಬಂದಳಿಯ ಮಗನಲ್ಲ । ತೌರಿಗೆ ।
ಮಾತು ತಂದವಳು ಮಗಳಲ್ಲ ॥
ಗಂಡನ ಮನೆಸುದ್ದಿ ಕೊಂಡಾಡು ತಂಗೆವ್ವ ।
ಉಂಡುಟ್ಟುರಾಯ ಪಗಡಿಯ । ಆಡುವ ಸುದ್ದಿ ।
ತಂದ್ಹೇಳಬೇಡ ತವರಿಗೆ ॥
ನೆರೆಮನೆಯ ಮಾತನ್ನು ಮನದೊಳು ತರಬೇಡ ।
ಮನೆಯಲ್ಲಿ ಭೇದ ಬಗೆಬೇಡ । ನನಮಗಳೆ ।
ತುಂಬಿದ ಮನೆಯ ಒಡೆಬೇಡ ॥
ಹೆಣ್ಣಿನ ಜಲ್ಮವ ಮಣ್ಣುಮಾಡಲಿ ಬೇಕು ।
ಸುಣ್ಣದಹರಳಾಗಿ ಸುಡಬೇಕು । ಈ ಜಲ್ಮ ।
ಮಣ್ಮಾಡಿ ಮರ್ತ್ಯ ಗೆದಿಬೇಕು ॥

ಈ ಮಾತುಗಳು ಗಂಡನ ಮನೆಗೆ ಹೋಗುವ ಮಗಳಿಗೆ ಅದೆಷ್ಟು ಬಗೆಯ ಬುದ್ಧಿವಾದಗಳನ್ನು ಪ್ರಸಾದ ವಾಣಿಯಿಂದ ಹೇಳಿಕಳಿಸಿವೆ. ಅತ್ತೆಮಾವ, ಸುತ್ತೇಳು ನೆರೆ, ದೊರೆ ಎಲ್ಲರಿಗೆ ಅಂಜಿ ಬಾಳಬೇಕು. ಹೀಗೆ ಅಂಜಿ ನಡಿಯದವಳು ವಾಮಾಚಾರಿಣಿ. ಅವಳು ಕುಲಕ್ಕೆ ಆಧಿ ಅಲ್ಲವೆ ? ಹಡೆದ ಮನೆ ಪಡೆದ ಮನೆ ಎರಡೂ ಗೌರವ ದಿಂದ ಇರಲು ನಿನ್ನ ಸತ್ಸಂಪ್ರದಾಯಬದ್ಧ ಗೃಹಿಣೀಪದ ಆವಶ್ಯಕ. ಗಂಡನ ಮನೆ ಸುದ್ದಿಯನ್ನು ಕೊಂಡಾಡ ಬೇಕು ಅಲ್ಲದೆ ತೆಗಳಬಾರದು. ತೆಗಳಿದರೆ ಅವರೆಲ್ಲರಿಗೂ ಸಿಟ್ಟು; ಆಗ ನಿನ್ನ ಸ್ಥಿತಿ ದುರ್ಭರ. ನೆರೆಮನೆಯವರ ಮಾತನ್ನು ಸತ್ಯವೆಂದೇ ನಂಬಬೇಡ. ಮಾತ್ಸರ್ಯದಿಂದ ನಿನ್ನ ಮನೆ ಒಡೆಯಲು, ಮನ ಒಡೆಯಲು ಅವರು ಪ್ರಯತ್ನಿಸುತ್ತಾರೆ. ಹೆಣ್ಣು ಭೂಮಿಯಂತೆ ಕ್ಷಮಾಶೀಲ ಳಾಗಿ ಈ ಮರ್ತ್ಯವನ್ನು ಗೆಲ್ಲಬೇಕು. ಒಟ್ಟಿನಲ್ಲಿ ತವರಿಗೆ ಮಾತು ತಂದವಳನ್ನು ನಾವು ಮಗಳೆಂದು ಭಾವಿಸುವು ದಿಲ್ಲ. ಈ ಎಲ್ಲ ಮಾತುಗಳು ಯಾವ ಸುಸಂಸ್ಕೃತ ಜನಾಂಗಕ್ಕೂ ಸೂತ್ರಪ್ರಾಯಗಳು. ಸೂಕ್ತಿಗಳು, ಸೂಳ್ನುಡಿಗಳು.

**ವಿರಹದ ದುಃಖ**

ಹೆಣ್ಣು ಪ್ರಥಮತಃ ಗಂಡನ ಮನೆಗೆ ಹೋಗು ವಾಗ ಹಡೆದ ತಾಯಿತಂದೆಗಳೇ ಮೊದಲಾದ ವಧೂ ಬಂದುಗಳಿಗೆ ಆಗುವ ವಿರಹತಾಪ ಅಷ್ಟಿಷ್ಟಲ್ಲ. ಸರ್ವ ಸಂಗಪರಿ ತ್ಯಾಗಿಯಾದ ಕಣ್ವಮಹರ್ಷಿಗಳೇ ಹೊಟ್ಟೆಯ ಮಗಳಲ್ಲದ ಶಕುಂತಲೆಯ ವಿರಹದಿಂದ ಕಣ್ಣೀರು ಮಿಡಿ ದರೆಂದು ಕಾಳಿದಾಸ ಶಾಕುಂತಲದಲ್ಲಿ ಹೇಳಿದ್ದಾನೆ 'ಯಾಸ್ಯತ್ಯದ್ಯಶಕುಂತಲೇತಿ ಹೃದಯಂ....' ಮುಂತಾದ ಪದ್ಯಗಳಿಂದ. ಇದು ಎಲ್ಲರ ಅನುಭವದಲ್ಲೂ ಉಂಟು. ಅದೇ ದುಃಖ ಹೋಗುವ ಹೆಣ್ಣಿಗೂ ಆಗುತ್ತದೆ.

ಹೆಣ್ಣು ಹಡೆಯಲುಬೇಡ ಹೆರವರಿಗೆ ಕೊಡಬೇಡ
ಹೆಣ್ಣು ಹೋಗುವಾಗ ಅಳಬೇಡ । ಹಡೆದವ್ವ ।
ಸಿಟ್ಟಾಗಿ ಶಿವಗ ಬೈಬೇಡ ॥

ಮಗಳನ್ನು ಕಳುಹ್ಯಾನು ಕಣ್ಣೀರು
ಸುರಿಸ್ಯಾನು ।
ಸಣ್ಣ ಸೆಲ್ಲೆದಲ್ಲೆ ಮುಸುಗ್ಹಾಕಿ। ಹಡೆದಪ್ಪ।
ಹೆಣ್ಣೆ ಸಾಕೆಂದ ಜಲುಮಕ್ಕೆ ॥

ತಂಗಿಯ ಕಳುಹ್ಯಾನು ಒಳಗ್ಹೋಗಿ ಅಳುತಾನು।
ಅಂಗಿ ಸೆರಗಾಗ ಒರಿಸ್ಯಾನು । ಅಣ್ಣಯ್ಯ ।
ತಂಗಿ ಇಂದಿಗೆ ಎರವೆಂದ ॥—
ಹುಟ್ಟಿದ ಮನೆಯಿಂದ ಹೊಚ್ಚಲನಿಳಿವಾಗ ।
ಹೊಟ್ಟೆಗೆ ಸಿಡಿಲು ಬಡಿದಂಗ । ಕಣ್ಣೀರು ।
ಹಿರಿಯ ಹೊಳೆಯಾಗಿ ಹರಿದಂಗ ॥

ಹುಟ್ಟಿಬೆಳೆದ ಮನೆಯನ್ನು ಬಿಟ್ಟು ಬೇರೊಬ್ಬರ ಮನೆಯಲ್ಲಿ ಮಾತೃಸ್ಥಾನದ ಗೌರವ ಪದ ಪಡೆಯಲು ಹೆಣ್ಣು ಹೆಣ್ಣಾಗದೆ ದೇವತೆಯಾಗಬೇಕು. ದೇವತೆಯಾಗಬೇಕಾದರೆ ತಾಳ್ಮೆ, ಕ್ಷಮೆ, ಧೈರ್ಯ, ಕಷ್ಟಸಹಿಷ್ಣುತಾ ಭಾವ, ಬಂಧು ಬಳಗದಲ್ಲಿ ಕಕ್ಕುಲತೆ ಇವೆಲ್ಲ ಗುಣಗಳು ಆವಳಿಗೆ ಮಾತೃಸ್ಥಾನದ ಮಹಾ ಪಟ್ಟವನ್ನು ಕೊಡ ಬಲ್ಲವು. ಇಲ್ಲವಾದರೆ ಹೆಣ್ಣಾಗಿ ಪ್ರಯೋಜನವಿಲ್ಲವೆಂದು ಮೇಲಿನ ಪದ್ಯಗಳ ಸಮಾಲೋಚನೆಯ ಮಥಿತಾರ್ಥ.

# ನಾನು ಬೋಧಕನಂತೆ !

ಓದಿದ್ದು ಮುಗಿಯಿತೆಂದಾದರಿಸುತೆನ್ನವರು
ಬೋಧಕನ ವೃತ್ತಿಯನು ದೊರಕಿಸಿದರು
ಸಾಧಕನು ನಾನಿನ್ನು ಶಿಕ್ಷಕನದೆಂತಹೆನು
ಹನಿಗೆ ಪಂಥವೆ ಕಡಲ ಶಕ್ತಿಯೆದುರು

ಸಾಹಿತ್ಯ ಪಾಂಡಿತ್ಯ ಸಂಶೋಧನಾ ಪಟುತೆ
ಕಟ್ಟುವುವು ಹುಸಿಯ ಸರ್ವಜ್ಞಪಟ್ಟ
ಅರಿತೆನೆಂಬಾ ಭ್ರಮೆಯೆ ಕಿಟಕಿಯಿಲ್ಲದ ಕೋಣೆ—
ಯಾಗಿ ಮುಚ್ಚಿದೆ ನನ್ನ ಬಾಳಗುಟ್ಟ

ಸೂರಿನಾ ಎತ್ತರಕು ಏರಲಾರದ ನಾನು
ಹಾರುವೆನೆ ಬಿತ್ತರದ ಆಕಾಶಕೆ
ಮೊಣಕಾಲಿನುದ್ದದಾ ನೀರಿಗಂಜುವ ನಾನು
ಇಣುಕುವೆನೆ ಕಡಲಿನಾಳದ ದೇಶಕೆ.

ಹದಕೊಡದ ಉಳಿನಾನು ಎರಡೇಟಿಗೆ ಮೊಂಡು
ಗಟ್ಟಿಬಂಡೆಯು ಕೊರೆವವೊನಚಿಹುದೆ ಇದಕೆ
ಕಲ್ಪನೆಯ ಕೊರತೆಯಲಿ ಶಿಲ್ಪ ಮೂಡುವುದೇನು
ಗುರುವೆಂಬ ಗರ್ವದಾ ಬದುಕೊಂದು ಬದುಕೆ

ಬರೆದೋದಿಸುವ ಗುರುವು ನೀನೊಬ್ಬನೇ ಬಬ್ಬ
ನಿನಗಿತ್ತೆನ್ನೈ ನನ್ನ ಬಾಳಹೊತ್ತಗೆಯ
ಈ ಎಲ್ಲ ಪುಟಗಳಲು ಬರೆಯಬಲ್ಲವ ನೀನೆ
ಅಂದಿಗರಿವೆನು ಬೋಧಕನ ಗುರಿಯ ಬಗೆಯ.

—ತಾ. ವೆಂ. ಮು.

# ವಿಧಿಲೀಲೆ






ಲೇಖಕರು :

**ಕೆ. ಜಿ. ರಂಗಯ್ಯ**

ಶ್ರೀ ಸಿದ್ಧಗಂಗಾ ಗುರುಕುಲ

●

ಎಂದಿನಂತೆ ಸಂಜೆ ಸುತ್ತಾಡ ಹೊರಟಿದ್ದೆ. ಊರ ಹೊರಗಿನ ಕೊಳದ ಬಳಿ ಬಂದೆ. ಅರಳಿದ ಕಮಲದಲ್ಲಿ ಕುಳಿತು ಮಧುಪಾನದಲ್ಲಿ ನಿರತನಾಗಿದ್ದ ಮಧುಪನನ್ನು ಕಂಡೆ. ಸ್ವಲ್ಪ ಹೊತ್ತಿನಲ್ಲಿಯೇ ಬಾನಿನಿಂದ ಭಾನು ಸರಿದ. ಕಮಲ ಕುಗ್ಗಿತು. ಕಮಲವಳೆಗಳಲ್ಲಿ ಭ್ರಮರ ಬಂದಿಯಾದ ! ದಳಗಳನ್ನು ತುಂಡರಿಸಿ ಹೊರಬರ ಬಹುದಿತ್ತು. ಆದರೆ ಅವನು ಕೃತಘ್ನನಿರಲಿಲ್ಲ. ಹೊರ ಬರದೆ, ಇರುಳಳಿದು ಅರುಣೋದಯವಾಗುವನಕ ನೀರಜನಿವಾಸಿಯಾಗಿರಲು ನಿಶ್ಚಯಿಸಿ ಒಳಗುಳಿದ. ಮಲಗುವ ಮುನ್ನ ಮನೆ, ಮಡದಿ, ಮಕ್ಕಳನ್ನು ನೆನೆದು, ಕೊನೆಗೆ ಇರುಳಳಿದು, ರವಿ ಬೆಳಗಿ, ಕಮಲೆ ಕದ ತೆಗೆದು, ತಾನು ಮರಳಿ ಮನೆ ಸೇರಿ, ಮಡದಿ ಮಕ್ಕಳನ್ನು ಪಡೆದು ನಲಿವ ಸವಿಗನಸೊಂದ ಕಂಡ ! ಅಷ್ಟರಲ್ಲಿಯೇ ಮದಿಸಿದಾನೆಯೊಂದು ಬಂದು ಸಹಸ್ರ ದಳವನ್ನು ಸೆಳೆದು ತುಳಿಯಿತು. ಮಧುಪನಾಸೆ ಮಣ್ಣು ಗೂಡಿತು ! ಅವನ ಕನಸು ನನಸಾಗಲಿಲ್ಲ. ಆಶಾ ಗೋಪುರ ಕಳಚಿಬಿತ್ತು ! " ಈಗಿರುವವನು ಮರು ಗಳಿಗೆಯಲ್ಲಿರಬಲ್ಲನೆಂಬುದಕ್ಕೆ ಭರವಸೆಯಲ್ಲಿ ? "

ಎಲ್ಲವೂ

## ವಿಧಿಲೀಲೆ

೧

ಬಯಲಿನಲ್ಲಿ ಸುತ್ತಿ ಸಂಜೆ
ಬರುವ ವೇಳೆಯಲ್ಲಿ ಕೊಳದ
ಬಳಿಯೊಳಾನು ಕಂಡುದೆಂಥ
ಬಗೆಯ ನೋಟವು !

೨

ಕಮಲ ಪುಷ್ಪಪಾತ್ರೆಯಲ್ಲಿ
ಕುಳಿತು ಸೊದೆಯನೀಂಟುತಿರುವ
ಮಧುಪನನ್ನು ಕಂಡು ನಾನು
ಚಕಿತನಾದೆನು |

೩

ಸಂಜೆ ಸಮಯಕಿನ್ನು ಕಮಲ
ಮುದುಡಿ ಮೊಗ್ಗೆಯಾಗಲಿರಲು
ಮಧುಪನೇನ ಮಾಳ್ಪನೆಂದು
ನೋಡುತಿರ್ದೆನು ।

೪

ಭಾನು ಸರಿದ ಬಾನಿದಿಂದ
ನಾನು ನಿಂದೆ ತವಕದಿಂದ
ಮಧುಪ ಸೊದೆಯನೀಂಟುತಿರಲು
ಕಮಲ ಮುಚ್ಚಿತು ।

೫

ರಮಿಸಲೆಂದು ರತಿಯ ಮನೆಗೆ
ಬಂದ ಮದನ ಬಂದಿಯಾದ
ನಡೆವುದೇನು ಕುಹಕವೆಂದು
ತಿಳಿಯೆನಿಂತೆನು ।

೬

ಸೆರೆಯೊಳಿರುವ ಮಧುಪನೀಗ
ಬರುವನೆಂತು ಹೊರಗೆ ಬೇಗ
ಅರಿಯಬೇಕು ಎಂದು ನಾನು
ತ್ವರಿತನಾದೆನು ।

೭

ಒಳಗೆ ನಡೆಯುತಿಹುದದೇನು ?
ತಿಳಿಯಬೇಕು ಎಂದು ನಾನು
ಬಳಿಗೆ ಹೋಗಿ ಕಿವಿಯ ಕೊಟ್ಟು
ಕೇಳುತಿರ್ದೆನು ।

೮

ಮಧುಪ ಮೆಲ್ಲನುಸುರುತಿರಲು
'ಸಿಡುಕನೊಳಗೆ ತೋರುತಿರುವ-
ನುಡುಪನನ್ನು ತೆಗಳುತಿರುವ-
ನೆ'ಂದುಕೊಂಡೆನು ।

೯

'ಮಡದಿ ಮಕ್ಕಳೆನ್ನ ಬರವ
ನಿರುಕಿಸುತ್ತ ಮನೆಯೊಳವರು
ತವಕಪಡುತಲಿರಲುಬಹುದು'
ಎಂದುಕೊಂಡನು ।

೧೦

'ಮಡದಿ ನಾಳೆ ಕೇಳಿದಾಗ-
'ಒಡೆಯ ! ನಿನ್ನೆ ಬರದೆ ನೀವು
ನಿಂತಿರೇಕೆ ? ಎಲ್ಲಿ ? ' ಎಂದು
ಏನ ಹೇಳಲಿ ? "

೧೧

"ಹುಡುಕುತೆನ್ನನೆನ್ನ ಕುವರ
ಸಿಡುಕಿನಿಂದ ಹೋಗಿ, ತಾಯಿ-
ಯೊಡನೆ ದೂರ ಹೇಳಬಹುದು"
ಎಂದುಕೊಂಡನು ।

೧೨

"ಮುದ್ದಿನೆನ್ನ ಕಿರಿಯ ಮಗಳು
ಎದ್ದು ಅಳುತಲಿರಲುಬಹುದು
ಸದ್ದು ಕೇಳಲೊಲ್ಲದೇಕೆ ? "
ಎನ್ನುತಿರ್ದನು ।

೧೩

ಕದವನೊಡೆದು ನುಗ್ಗಿ ಬರುವ-
ನೊಡನೆಯೆಂದು ಬಗೆಯುತಿದ್ದೆ
ನಡೆದುದೇನು ಬಲ್ಲಿರೇನು ?
ಎಲ್ಲ ಮೌನವು !

೧೪

"ಮನದ ಬಯಕೆಯನ್ನು ಪೂರ್ಣ-
ಗೊಳಿಸಿದಂಥ ರತಿಗೆ ನೋವ-
ನುಳಿಸಿ ಹೋಗಲಾರೆನೆಂ"ದು
ಮಲಗಿ ಬಿಟ್ಟನು ।

೧೫

"ಉಣ್ಣಲಿತ್ತ ಮನೆಗೆ ತಿರುಗಿ
ಕನ್ನವಿಕ್ಕಬಾರದೆ''ಂಬ
ನನ್ನಿನುಡಿಯನೊಂದನವನು
ಕಲಿಸಿಕೊಟ್ಟನು ।

೧೬

ಅರುಹುತಿಹೆನು ಕನಸಿನಲ್ಲಿ
"ಇರುಳು ಕಳೆದು, ರವಿಯು ಬೆಳಗಿ
ಬರಲು, ಕಮಲೆ ಬಾಗಿಲನ್ನು
ತೆರೆದುಬಿಡುವಳು."

೧೭
"ಇಂದು ಕಷ್ಟಪಡುವುದೇಕೆ ?
ಮುಂದೆ ಸಿಗುವ ಸುಖಕೆ ತಾನೆ ?
ಒಂದೆ ನಿಶಿಯ ಬಂದಿ ನಾನು"
ಎಂದುಕೊಂಡನು |

೧೮
"ಪಡೆಯಲಾನು ಮುಕ್ತಿಯನ್ನು
ಮಡದಿಯೊಡನೆ ಮಕ್ಕಳನ್ನು
ಪಡೆದು ಸುಖದಿ ಬಾಳ್ವೆನೆಂ"ದು
ನುಡಿದುಕೊಂಡನು |

೧೯
ಜಲಮೊಳಿದ್ದ ಶಶಿಯ ಬಿಂಬ
ವಲುಗಿತೇಕೆ ? ಏನು ? ಎಂಬ
ತವಕವೆನ್ನ ತಿಳಿಯ ಮನವ
ಕಲಕಿಬಿಟ್ಟಿತು !

೨೦
ಭಯಮೊಳಾನು ಬೆದರಿ ಬೇಗ
ತಿರುಗಿ ಹಿಂದೆ, ಕಂಡೆನಾಗ
ಮದಿಸಿದಾನೆಯೊಂದು ಬಂದು
ಕೊಳದಿ ನಿಂದಿದೆ !

೨೧
ಕೊಳದ ದಂಡೆಯಿಂದ ನಾನು
ಸುಳಿದು ನಿಂದು ಕಂಡುದೇನು ?
ಸೆಳೆದು ಕರಿಯು ಕಮಲವನ್ನು
ತುಳಿದುಬಿಟ್ಟಿತು !

೨೨
ಮಧುಪನಾಸೆ ಮಣ್ಣುಪಾಲು
ಇದುವೆ ಜಗದ 'ಗೆಲವು-ಸೋಲು'
ಮನದ ಬಯಕೆಯೊಮ್ಮೆ ಬರಿಯ
ಗಾಳಿಗೋಪುರ |

೨೩
"ಜೀವಿಯೊಂದ ಬಗೆದರಾಗ
ದೈವವೊಂದ ಬಗೆವುದೆಂ"ದು
ಬಗೆದು ಮನದೊಳಾಗ ನಾನು
ಬಹಳ ನೊಂದೆನು |

೨೪
"ಮಧುಪ ಕಂಡ ಕನಸು ಪಾಪ
ನನಸದಾಗಲಿಲ್ಲವೆಂ"ದು
ಮನಸಿನೊಳಗೆ ನೊಂದು ಬೆಂದು
ಮನೆಗೆ ಬಂದೆನು |

೨೫
"ಕನಸಿನೊಳಗೆ ಕಾಂಬುದೆಲ್ಲ
ನನಸದಾಗಬಲ್ಲುದಲ್ಲ !
ಇಂದಿನವನು ನಾಳೆಯಿಲ್ಲ ! ! "
ವೆಂದು ತಿಳಿದೆನು |

ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಮ್
ಭಾಸ್ವಾನುದೇಷ್ಯತಿ ಹಸಿಷ್ಯತಿ ಪಙ್ಕಜಶ್ರೀಃ |
ಇತ್ಥಂ ವಿಚಿಂತಯತಿ ಕೋಶಗತೇ ದ್ವಿರೇಫೇ
ಹಾ ಹಂತ ! ಹಂತ ! ! ನಲಿನೀಂ ಗಜ ಉಜ್ಜಹಾರ ||

(ಎಂಬ ಸಂಸ್ಕೃತ ಶ್ಲೋಕವೊಂದರ ಆಧಾರದಿಂದ)

—ಗೀತಾ ಭಾಷ್ಯ—

# ಶ್ರೀಮದ್ಭಗವದ್ರಾಮಾನುಜಾಚಾರ್ಯ

ಅನುವಾದಕ :

'ಗೋಕುಲಾನಂದ'

(ಮುಂದುವರಿದುದು)

### ಸಂಜಯ ಉವಾಚ

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ
ರಥೋತ್ತಮಮ್॥
ತತ್ರಾಪಶ್ಯತ್ ಸ್ಥಿತಾರ್ನ್ ಪಾರ್ಥಃ ಪಿತ್ರೂನಥ
ಪಿತಾಮಹಾನ್।
ಆಚಾರ್ಯಾನ್ಮಾತುಲಾನ್ ಭ್ರಾತ್ರೂನ್ ಪುತ್ರಾನ್
ಪೌತ್ರಾನ್ ಸಖೀಂಸ್ತಥಾ ॥೨೬॥
ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ।
ತಾನ್ಸಮೀಕ್ಷ್ಯ ಸಕೌಂತೇಯಃ ಸರ್ವಾನ್ಬಂಧೂನ್
ಅವಸ್ಥಿತಾನ್ ॥೨೭॥
ಕೃಪಯಾ ಪರಯಾವಿಷ್ಟಃ ವಿಷೀದನ್ ಇದಮಬ್ರವೀತ್।

ಅಲ್ಲಿ ಆ ಎರಡು ಸೇನೆಗಳಲ್ಲಿ ಅರ್ಜುನನು ಯುದ್ಧಕ್ಕಾಗಿ ಸಿದ್ಧರಾಗಿ ನಿಂತಿರುವ ಪಿತೃಗಳು-ಪಿತಾಮಹರು, ಆಚಾರ್ಯರು, ಮಾವಂದಿರು, ಸೋದರರು, ಮಕ್ಕಳು, ಮೊಮ್ಮಕ್ಕಳು, ಮಿತ್ರರು, ಭಾವಮೈದುನರು ಇವರನ್ನೆಲ್ಲಾ ನೋಡಿದನು. ಈ ರೀತಿ ನಿಂತಿರುವ ಬಂಧುಬಾಂಧವರನ್ನು ನೋಡಿದ ಅರ್ಜುನನು ಪರಮ ಕರುಣೆಯನ್ನು ಹೊಂದಿದನು. ಮತ್ತು ಅತ್ಯಂತ ವಿಷಾದದಿಂದ ಭಗವಂತನನ್ನು ಕುರಿತು ಈ ರೀತಿ ಭಿನ್ನವಿಸಿಕೊಂಡನು.

### ಅರ್ಜುನ ಉವಾಚ (ಅರ್ಜುನನು ಹೇಳಿದನು)

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ
ಸಮುಪಸ್ಥಿತಂ ॥೨೮॥
ಸೀದಂತಿ ಮಮಗಾತ್ರಾಣಿ ಮುಖಂಚ ಪರಿಶುಷ್ಯತಿ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ
ಜಾಯತೇ ॥೨೯॥
ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ।
ನಚ ಶಕ್ನೋಮ್ಯವಸ್ಥಾತುಂ ಭ್ರಮತೀವಚಮೇ
ಮನಃ ॥೩೦॥
ನಿಮಿತ್ತಾನಿಚ ಪಶ್ಯಾಮಿ ವಿಪರೀತಾನಿ ಕೇಶವ।
ನಚಶ್ರೇಯೋನು ಪಶ್ಯಾಮಿ ಹತ್ವಾ ಸ್ವಜನ
ಮಾಹವೇ ॥೩೧॥
ನಕಾಂಕ್ಷೇ ವಿಜಯಂ ಕೃಷ್ಣನ ಚರಾಜ್ಯಂ ಸುಖಾನಿಚ।
ಕಿನ್ನೋ ರಾಜ್ಯೇನ ಗೋವಿಂದ ಕಿಂ ಭೋಗೈಃ
ಜೀವಿತೇನವಾ ॥೩೨॥
ಯೇಷಾಮರ್ಥೇಕಾಂಕ್ಷಿತನ್ನೋ ರಾಜ್ಯಂ ಭೋಗಾಃ
ಸುಖಾನಿಚ।
ತ ಇಮೇಮಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ
ಧನಾನಿಚ ॥೩೩॥
ಆಚಾರ್ಯಾಃ ಪಿತರಃ ಪುತ್ರಾಃ ತಥೈವಚಪಿತಾಮಹಾಃ।
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಸ್ಸಂಬಂಧಿನ
ಸ್ತಥಾ ॥೩೪॥

ತುಮಿಚ್ಛಾಮಿ ಘ್ನತೋಪಿ ಮಧುಸೂದನ|
ಅಪಿತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿನ್ನು
ಮಹೀಕೃತೇ ||೩೫||

ಪರಮಾತ್ಮಾ ! ಯುದ್ಧಸನ್ನದ್ಧರಾಗಿ ನಿಂತಿರುವ ಈ ಸ್ವಜನ ಸಮುದಾಯವನ್ನು ನೋಡಿ ನನ್ನ ದೇಹವೆಲ್ಲ ನಡುಗುತ್ತಿದೆ ದುಃಖ ಉಮ್ಮಳಿಸಿ ಬರುತ್ತಿದೆ. ಕೈಯಿಂದ ಗಾಂಡೀವ ಧನುಸ್ಸು ಜಾರಿ ಬೀಳುತ್ತಿದೆ. ದೇಹದ ಚರ್ಮ ಬೆಂಕಿಯಿಂದ ಸುಡುವಂತೆ ಉರಿಯಲು ಹತ್ತಿದೆ, ನಿಲ್ಲಲು ಅಸಮರ್ಥನಾಗಿದ್ದೇನೆ. ನನ್ನ ಮನಸ್ಸು ಗರಗರನೆ ಸುತ್ತುತ್ತಿದೆ. ಯುದ್ಧದಲ್ಲಿ ಸ್ವಜನ ಸಮೂಹ ವನ್ನು ಕೊಂದು ನಾನು ಯಾವ ವಿಧದ ಶುಭದ ಏಳಿಗೆ ಯನ್ನೂ ಪಡೆಯಲಾರೆನು.

ಹೇ ಪ್ರಭು ! ಗೋವಿಂದ ! ! ನನಗೆ ಯುದ್ಧವೂ ಬೇಡ, ರಾಜ್ಯವೂ ಬೇಡ ! ! ರಾಜ್ಯ, ಭೋಗ, ಜೀವನ ದಿಂದ ಏನು ಪ್ರಯೋಜನ? ಯಾವ ರಾಜ್ಯ ಭೋಗ ಸುಖದ ಪ್ರಾಪ್ತಿಗಾಗಿ ಈ ಗುರು ಜನರು, ಪಿತಾಮಹರು, ಪಿತೃಗಳು, ಪುತ್ರ—ಪೌತ್ರರು, ಮಾವಂದಿರು, ಭಾವ ಮೈದುನರು, ಸ್ನೇಹಿತರು. ಇವರೇ ಮೊದಲಾದವರನ್ನು ಕೊಂದು ಪಾಪವನ್ನು ಹೊಂದಲಾರೆ. ಇವರನ್ನು ಕೊಲ್ಲಲು ಮನಸ್ಸುಬಾರದು, ಒಂದು ವೇಳೆ ಮೂರು ಲೋಕಗಳ ಒಡೆತನ ಸಿಕ್ಕಿದರೂ ಇವರನ್ನು ಕೊಲ್ಲಲು ಇಚ್ಛಿಸುವುದಿಲ್ಲ ಈ ನೆಲಕ್ಕಾಗಿ ಕೊಲೆಗೆ ಪ್ರಯತ್ನಿಸ ಲೇನು ? ಆಗದು.

ಶ್ಲೋಕ .- ನಿಹತ್ಯಧಾರ್ತರಾಷ್ಟ್ರಾನ್ನಃ ಕಾಪ್ರೀತಿಸ್ಸ್ಯಾ
ಜನಾರ್ದನ|
ಪಾಪಮೇನಾಶ್ರಯೇದಸ್ಮಾನ್.ಹತ್ವೈತಾನಾತ
ತಾಯಿನಃ ||೩೬||
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್
ಸ್ವಬಾಂಧವಾನ್|
ಸ್ವಜನಂಹಿ ಕಥಂಹತ್ವಾ ಸುಖಿನಃ ಸ್ಯಾಮ
ಮಾಧವ ||೩೭||

ಜನಾರ್ದನ ! ಈ ಧೃತರಾಷ್ಟ್ರ ಪಕ್ಷದ ಜನರನ್ನು ಕೊಲ್ಲುವುದರಿಂದ ಪ್ರಯೋಜನವಾದರೂ ಏನಿದೆ? ಈ ಆತ ತಾಯಿಗಳನ್ನು ಕೊಲ್ಲುವುದರಿಂದ ಪಾಪವೇ ಸಂಘಟಿತವಾಗುತ್ತದೆ. ಆದುದರಿಂದ ಈ ಧೃತರಾಷ್ಟ್ರನ ಕಡೆಯ ಸ್ವಬಂಧುಗಳನ್ನು ಕೊಲ್ಲುವುದು ಉಚಿತವೆಂದು ನನಗೆ ಅನ್ನಿಸುವುದಿಲ್ಲ. ಮಾಧವ ! ಈ ನನ್ನ ಬಂಧು ಗಳನ್ನು ಕೊಂದು ನಾನು ಸುಖವನ್ನು ಪಡೆಯಲಾರೆ.

ಯದ್ಯಪ್ಯೇತೇ ನಪಶ್ಯಂತಿ ಲೋಭೋಪಹತಚೇತಸಃ|
ಕುಲಕ್ಷಯಕೃತಂದೋಷಂ ಮಿತ್ರದ್ರೋಹೇಚ
ಪಾತಕಂ ||೩೮||
ಕಥನಜ್ಞೇಯಮಸ್ಮಾಭಿಃಪಾಪಾದಸ್ಮಾನ್ನಿವರ್ತಿತುಮ್|
ಕುಲಕ್ಷಯ ಕೃತಂ ದೋಷಂ ಪ್ರಪಶ್ಯದ್ಭಿಃ
ಜನಾರ್ದನ ||೩೯||

ಯಾರ ಮನಸ್ಸು ಲೋಭದ ದೆಸೆಯಿಂದ ಭ್ರಷ್ಟವಾಗಿದೆಯೋ ಅಂತಹವರು ಕುಲ ನಾಶದಿಂದ ಉಂಟಾದ ದೋಷವನ್ನಾಗಲೀ ಮಿತ್ರದ್ರೋಹದ ಪಾಪ ಕೆಲಸಕ್ಕಾಗಲೀ ಹಿಂದೆಗೆಯುವುದಿಲ್ಲ. ಆದರೆ ಪರಮಾತ್ಮ ನಮ್ಮಂತಹವರು ಕುಲ ನಾಶದಿಂದಾಗುವ ಪರಿಸ್ಥಿತಿಯ ಅರಿವು ಹೊಂದಿದವರು, ಈ ಪಾಪದಿಂದ ಬಿಡುಗಡೆಯೇ ಇಲ್ಲದಂತಾಗುವುದಲ್ಲವೇ ?

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ|
ಧರ್ಮೇನಷ್ಟೇ ಕುಲಂಕೃತ್ಸ್ನಂ ಅಧರ್ಮೋಭಿ
ಭವತ್ಯುತ ||೪೦||
ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ|
ಸ್ತ್ರೀಷುದುಷ್ಟಾಸು ವಾರ್ಷ್ಣೇಯ ಜಾಯತೆ ವರ್ಣ
ಸಂಕರಃ ||೪೧||
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯಚ|
ಪತಂತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕ
ಕ್ರಿಯಾಃ ||೪೨||
ದೋಷೈರೇತೈಃ ಕುಲಘ್ನಾನಾಂ ವರ್ಣ ಸಂಕರಕಾರಕೈಃ|
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ
ಶಾಶ್ವತಾಃ ||೪೩||
ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ
ಜನಾರ್ದನ|
ನರಕೇ ನಿಯತಂ ವಾಸೋ ಭವತೀತ್ಯನು ಶುಶ್ರುಮ||೪೪||

ಕುಲ ನಾಶವಾದ ಮೇಲೆ ಸನಾತನ ಕುಲ ಪರಂಪರೆ ಯಿಂದ ಬಂದ ಧರ್ಮವು ನಷ್ಟವಾಗಿ ಹೋಗುತ್ತದೆ, ಮತ್ತು ಧರ್ಮವೂ ಅಳಿಯುತ್ತ ಬಂದು ಅಧರ್ಮವು ಎಲ್ಲೆಲ್ಲಿಯೂ ಆವಿರ್ಭವಿಸುತ್ತದೆ.

ಪರಮಾತ್ಮ! ಅಧರ್ಮದ ಆವಿರ್ಭಾವದಿಂದ ಕುಲಸ್ತ್ರೀಯರು ನಿಂದನೀಯರೆನಿಸುತ್ತಾರೆ. ದೂಷಿತ ರಾದ ಸ್ತ್ರೀಯರ ದೆಸೆಯಿಂದ ವರ್ಣಸಾಂಕರ್ಯ ತಲೆದೋರುತ್ತದೆ. ಈ ವರ್ಣ ಸಾಂಕರ್ಯದಿಂದ ಕುಲಘಾತಕಿಗಳೂ ಪಾಪಕ್ಕೆಹೇಸದವರೂ ಹುಟ್ಟುತ್ತಾರೆ. ಅಂತಹವರ ಕುಲದಲ್ಲಿ ಪಿತೃಗಳಿಗೆ ಜಲೋದಕ ಕೊಡು ವುದು ನಿಂತು ಪಿತೃದೇವತೆಗಳು ವ್ಯಥೆಪಡಲು ಕಾರಣ ವಾಗುತ್ತದೆ.

ಭಗವನ್ ! ಈ ವರ್ಣ ಸಾಂಕರ್ಯದಿಂದ ಹುಟ್ಟಿದ ಕುಲಘಾತಕಿಗಳ ದೋಷದ ದೆಸೆಯಿಂದ ಸನಾತನ ಕುಲ ಧರ್ಮವೂ, ಜಾತಿಧರ್ಮವೂ ನಷ್ಟವಾಗಿ ಭ್ರಷ್ಟವಾಗಿ ಹೋಗುತ್ತದೆ. ಕುಲಧರ್ಮ ನಷ್ಟವಾದ ಮೇಲೆ ಭ್ರಷ್ಟಾಚಾರರು ಹುಟ್ಟಿ ನರಕಕ್ಕೆ ಹೋಗುತ್ತಾರೆಂದು ಕೇಳಿದ್ದೇನೆ.

ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ।
ಯದ್ರಾಜ್ಯ ಸುಖಲೋಭೇನ ಹಂತುಂಸ್ವಜನ
ಮುದ್ಯತಾಃ ॥೪೫॥

ಅಹೋ ವಿಷಾದಕರ ವಿಷಯ. ನಾವು ದೊಡ್ಡ ಪಾಪ ಕಾರ್ಯವನ್ನು ಮಾಡಲು ನಿಶ್ಚಯಿಸಿದ್ದೇವೆ. ರಾಜ್ಯ ಮತ್ತು ಸುಖದ ಲೋಭದಿಂದ ಕುಟುಂಬ ವರ್ಗ ದವರನ್ನೇ ಕೊಲೆಮಾಡಲು ಎಳಸಿದ್ದೇವೆ.

ಯದಿಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ।
ಧಾರ್ತರಾಷ್ಟ್ರಾ ರಣೇಹನ್ಯುಃ ತನ್ಮೇಕ್ಷೇಮತರಂಭ
ವೇತ್ ॥೪೬॥

ಒಂದುವೇಳೆ ಪ್ರತೀಕಾರೇಚ್ಛೆಯಿಲ್ಲದ ನಿಶ್ಶಸ್ತ್ರನಾದ ನನ್ನನ್ನು ಶಸ್ತ್ರಧಾರಿಗಳಾದ ಕೌರವರು ಯುದ್ಧದಲ್ಲಿ ಕೊಂದು ಹಾಕಿದರೆ ನನಗಾಗಿ ಹೆಚ್ಚು ಕಲ್ಯಾಣವನ್ನು ಸಾಧಿಸಿದಂತಾಗುತ್ತದೆ.

ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ
ಉಪಾವಿಶತ್।
ವಿಸೃಜ್ಯ ಸಶರಂ ಚಾಪಂ ಶೋಕ ಸಂವಿಗ್ನಮಾನಸಃ ॥೪೭॥

ಸಂಜಯನು ಹೇಳಿದನು .—ರಣಾಂಗಣದಲ್ಲಿ ಈ ಪ್ರಕಾರವಾಗಿ ಶೋಕದಿಂದ ತುಂಬಿದ ಮನಸ್ಸುಳ್ಳ ಪಾರ್ಥನು ಬಾಣ ಸಹಿತವಾಗಿ ಗಾಂಡೀವ ಧನುಸ್ಸನ್ನು ಪರಿತ್ಯಜಿಸಿ ರಥದ ಒಂದೆಡೆಯಲ್ಲಿ ಕುಳಿತುಬಿಟ್ಟನು.

ಭಾಷ್ಯ:-ಸ ತು ಪಾರ್ಥಃ ಮಹಾಮನಾಃ ಪರಮ ಕಾರುಣಿಕಃ ದೀರ್ಘಬಂಧುಃ ಪರಮಧಾರ್ಮಿಕಃ ಸಭ್ರಾತೃಕೋ ಭವದ್ಭಿಃ ಅತಿಘೋರೈಃ ಮಾರಣೈಃ ಜತು ಗೃಹಾದಿಭಿಃ ಅಸಕೃದ್ವಂಚಿತಃ ಅಪಿ ಪರಮ ಪುರುಷ ಸಹಾಯಃ ಅಪಿ ಹನಿಷ್ಯಮಾಣಾನ್ ಭವದೀಯಾನ್ ವಿಲೋಕ್ಯ ಬಂಧು ಸ್ನೇಹೇನ ಪರಮಯಾಚ ಕೃಪಯಾ ಧರ್ಮಾಧರ್ಮಭಯೇನ ಚ ಅತಿಮಾತ್ರ ಖಿನ್ನ ಸರ್ವ ಗಾತ್ರಃಯಾ ಸರ್ವಥಾ ಅಹಂ ನಯೋತ್ಸ್ಯಾಮಿ ಇತಿ ಉಕ್ತ್ವಾಬಂಧುವಿಶ್ಲೇಷಜನಿತ ಶೋಕ ಸಂವಿಗ್ನಮಾನಸಃ ಸಶರಂ ಚಾಪಂ ವಿಸೃಜ್ಯ ರಥೋಪಸ್ಥೇ ಉಪಾವಿಶತ್॥

ಅನುವಾದ :—ಆ ಮಹಾ ಮನಸ್ಸನ್ನುಹೊಂದಿದ ಪರಮ ದಯಾಳುವಾದ ಬಂಧುಸ್ನೇಹಿ ಪರಮಧಾರ್ಮಿಕ ನಾದ ಅರ್ಜುನನು ತನ್ನ ಸೋದರರೊಡನೆ ಕೂಡಿ ಕೌರವರ ದೆಸೆಯಿಂದ ಲಾಕ್ಷಾಗೃಹದಹನಾದಿ ಅನೇಕ ತೊಂದರೆಗಳನ್ನು ಅನುಭವಿಸಿದ್ದರೂ, ಪರಮ ಪುರುಷನೇ ಮಾರ್ಗದರ್ಶಕನಾಗಿದ್ದರೂ, ತನ್ನ ಬಂಧುಗಳ ಮೇಲಿನ ಅಭಿಮಾನದಿಂದ ಅವರನ್ನು ಕೊಲ್ಲಲು ಧರ್ಮಾಧರ್ಮದ ಭಯದಿಂದ ಅತ್ಯಂತ ಅನುಕಂಪವನ್ನು ಹೊಂದಿ ಸರ್ವಾಂಗವೂ ಅಭಿಮಾನದಿಂದ ಕೂಡಿ ನಡುಗುತ್ತಿರಲು, ಶ್ರೀ ಕೃಷ್ಣ ಪರಮಾತ್ಮನೊಡನೆ ನಾನು ಯುದ್ಧವನ್ನೇ ಮಾಡುವುದಿಲ್ಲವೆಂದು ಹೇಳಿ ಮುಂದಿನ ಬಂಧುವಿಯೋಗ ವನ್ನು ಮನದಲ್ಲಿ ತಂದುಕೊಂಡು ಶೋಕದಿಂದ ಕೂಡಿ ಬಿಲ್ಲು ಬಾಣಗಳನ್ನು ಒತ್ತಟ್ಟಿಗೆ ಒಗೆದು ರಥದ ಒಂದೆಡೆ ಕುಳಿತು ಬಿಟ್ಟನು.

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸು, ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ "ವಿಷಾದ ಯೋಗೋ" ನಾಮ ಪ್ರಥಮೋಧ್ಯಾಯಃ

ಈ ಪ್ರಕಾರವಾಗಿ ಶ್ರೀ ರಾಮಾನುಜಾಚಾರ್ಯ ವಿರಚಿತ ಗೀತಾ ಭಾಷ್ಯದ ಕನ್ನಡ ಅನುವಾದದ ಮೊದಲ ನೆಯ ಅಧ್ಯಾಯ ಸಮಾಪ್ತವಾದುದು.

# ಅನ್ವೇಷಣ

ಕವಿ :

## ಕೆ. ಗೋಪಾಲಕೃಷ್ಣರಾಯರು

೧

ನಾನು ಯಾರು ಎಲ್ಲಿಂದ ಬಂದೆ ಮು—
ತ್ತಾವ ನೆಲೆಗೆ ಗಮನ

ನಾನು ಎನ್ನುವುದೆ ಇಲ್ಲವಾಗುವುದೊ
ಒದಗೆ ದೀರ್ಘ ಶಯನ

ಉಸಿರು ನಿಂತಿತೆನೆ ಜಡವು ದೇಹವೆನೆ
ಜೀವಕೆಲ್ಲಿ ಸದನ

ಹೊಸತು ಹುಟ್ಟುತನವಾಗೆ ಬಯಸುವುದೊ
ಬೇರೆ ಬಸಿರ ಮಿಲನ

ಅಲ್ಲದಿರಲು ಬಾನೊಳಗೆ ತಾನೆ ತಾ—
ನಾಗಿ ಅಲೆವುದೇನೊ

ಅಲ್ಲೆ ತನ್ನತನ ಕಳೆದುಕೊಂಡು ಬಡ
ವಾಗಿ ನಿಲುವುದೇನೊ

ಜಡತೆ ಹೊಂದಿದರು ಒಳಗೆ ಜೀವದಣು
ಸುಪ್ತವಾಗಿ ಬೆಳೆದು

ಸಿಡಿದು ಬರಪೆ ಬಿಡುಗಡೆಯ ಕಾಲ ಸಂ—
ಜನಿಸೆ ಅಂಡವೊಡೆದು

ಅಣುವಿನಲ್ಲಿ ಹುದುಗಿರುವ ಶಕ್ತಿಯು-
ನ್ನೆಂತು ಅಳೆವೆನಯ್ಯ

ಅಣುವು ಒಂದೆ ಈ ಇಳೆಯನಾವರಿಸಿ
ತಾನೆ ನಿಲುವುದಯ್ಯ

ಅಣುವಿಗೆಂದಿಗು ಚ್ಯುತಿಯೆ ಇಲ್ಲವಹ
ವಿಭಜಿಸಿದರು ಕೊನೆಗೆ

ಅಣುಗಳಿಂದ ತುಂಬಿರುವ ವಿಶ್ವವಿದು
ದೇವ ನಿನ್ನ ಒಳಗೆ

ಅಣುವೆ ನಾನು ಈ ನಿನ್ನ ವಿಶ್ವದಲಿ
ಚಲಿಸುತಿರಲು ಸಲಿಗೆ

ಗಣಿಸೆ ಎನ್ನ ನೀ ನಡೆಸುತಿರುವೆ ನಾ
ಗೋಪನಾಗಿ ಬೆಳಗೆ

೨

ಹೂವು ಕಾಯಾಗೆ ಮಾಗಿ ಹಣ್ಣಾಗೆ
ಕಳಚಿ ನೆಲಕೆ ಬೀಳೆ

ಸಾವು ಎತ್ತಣದು ಸಸ್ಯ ಗೊಂಡಿತದೊ
ಮೊಳಕೆಯೆದ್ದು ಮೇಲೆ

ಗಂಡು ಹೆಣ್ಣು ಸಮ್ಮಿಳಿನಗೊಳಲು ಬಸಿ-
ರೊಡೆದು ಬಂತು ಜೀವ

ಕಂಡು ತನ್ನತನವುಂಡು ಪ್ರೇಮಘನ-
ಗೊಂಡು ಪೂರ್ಣ ನೋವ

ಸಸಿಯು ಗಿಡವು ಮರ ಮತ್ತೆ ಪುಷ್ಪ ಫಲ
ಮರಳಿ ಜೀವ ತಾಳೆ

ಬಸಿರು ಬದುಕು ಇದೆ ಸೃಷ್ಟಿ ಸಾಗುತಿದೆ
ನಿತ್ಯಾನಂತ ಲೀಲೆ

೩

ಸಸಿಯು ಖಗವುಮಿಗ ಮನುಜ ಜಲಜಜಗ
ತುಂಬಿ ತುಳುಕುತಿರಲು

ಎಸಗೆ ಪ್ರಳಯ ಮತ್ತಲ್ಲೆ ಉದಯ ಸಂ
ಮಿಳನ ಗೊಳುತಲಣುವು

ವಿತ್ವದಲಿ ರವಿ ಮಂಡಲಂಗಳೆನಿ—
ತೆನಿತೊ ರೂಪುಗೊಳಲು

ವಿಶ್ವವೆಲ್ಲ ಜೀವಾಣು ತತಿಗಳಿಂ
ದಾವರಿಸುತ ಬರಲು

ಕೋಟಿ ಕೋಟಿ ಇಳೆ ಜೀವರಾಶಿ ಬೆಳೆ
ಜನನ ಮರಣ ಬಳಸೆ

ಆಟವಾಯಿತಿದೊ ಸೃಷ್ಟಿಕರ್ತನಿಗೆ
ಸಾಟಿಯಿಲ್ಲ ಒಲಿಸೆ

೪

ಹುಟ್ಟು ಇರುವು ಇದೆ ಹುಟ್ಟುತಿರುವೆನಿದೆ
ಬಟ್ಟೆ ಬದಲು ಮಾಡಿ

ಕಟ್ಟಿಕೊಂಡ ಫಲ ಪಾಪ ಪುಣ್ಯಗಳ
ಕರ್ಮದಿಂದ ಕೂಡಿ

ಕರ್ಮ ತೊಡೆಯಲೆನೆ ಮರ್ಮ ತಿಳಿಹಿಸೆನೆ
ಗುರುವಿನಂಘ್ರಿ ಹಿಡಿದೆ

ಮರ್ಮವಿದಳವೆ ನಿಷ್ಕಾಮ ಕರ್ಮದಿಂ
ದಡಿಯನಿಟ್ಟು ನಡೆದೆ

ಸೃಷ್ಟಿಯಲ್ಲಿ ಸಂತುಷ್ಟಿಗೊಂಡು ನಾ
ನಿಂತು ನೋಡುತಿರುವೆ

ಸೃಷ್ಟಿಗೊಡೆಯ ಶ್ರೀಗೋಪನಲ್ಲೆ ಎ
ನ್ನಾತ್ಮವರ್ಪಿಸಿರುವೆ

೫

ಇದುವೆ ಶರಣಾಗತಿಯು
ಇದುವೆ ಆತ್ಮೋನ್ನತಿಯು

ನಾನು ನಿನ್ನಡಿಯಲ್ಲಿ
ನೀನು ಎನ್ನಲ್ಲಿ

ನೀನೆ ನಡೆಸುತಲಿರುವೆ
ವಿಶ್ವವೆಲ್ಲವ ಬಿಡದೆ

ಅಂತೆ ಈ ಗೋಪನನು
ನಿನ್ನ ಅಣುಗನನು



# ಜಯ ಭಾರತ

ಜಯ ಭಾರತ ಜಯ ಭಾರತ ಜಯ ಭಾರತ ಭುವಿಗೆ ।
ಜಯ ನಾಡಿಗೆ ಜಯ ಯೋಧಗೆ ಜಯ ಭಾರತಿಗೆ ॥

ಕನ್ನಡಿಗನು ನೀನಾದಡೆ ಕಲಿಯಾಗಲೆ ಬೇಕು
ರಣರಂಗದಿ ಕಾದಾಡಲು ಹುಲಿಯಾಗಲೆ ಬೇಕು
ಕಡುವೈರಿಯ ಒಣಜಂಬವ ನೀ ಮುರಿಯಲೆ ಬೇಕು
ಜಯ ಭಾರತ ಕೀರ್ತಿ ಧ್ವಜವ ಹಿಡಿದೆತ್ತಲೆ ಬೇಕು

ವೈರಿಯ ಬಲವೆಲ್ಲವೂ ಎಂತಾದರೂ ಇರಲಿ
ಭರಸಿಡಿಲದು ಮೇಲೆರಗುತ ಭರದಿಂದಲೆ ಬರಲಿ ನೀ
ಭರದಿಂದಲೆ ನುಗ್ಗುತ್ತಲೆ ಹೊಡೆ ವೈರಿಯ ಎದೆಗೆ
ಶಿವ ಕಾಯ್ವನು ನಿನ್ನೊಂದಿಗೂ ನಡಿ ಯೋಧರಪಡೆಗೆ.

ವೈರಿಯ ಭಲ ಕೌರವ ಭಲ ಅಕ್ಷೋಯಣಿಯಂತೆ
ನಿನ್ನಯ ಭಲ ಧರ್ಮದ ಭಲ ಅಕ್ಷಯವಾಗ್ಯುದಂತೆ
ಆತ್ಮದ ಅಭಿಮಾನವದೆ ನಿನ್ನಯ ದಿವ್ಯಾಸ್ತ್ರ
ಆತ್ಮ ದ್ರೋಹಿಗಳಲಿ ಇದ್ದರೂ ಅಲ್ಲದುಶಸ್ತ್ರಾಸ್ತ್ರ

ಓ ಶಾಂತಿಯ ಶ್ರೀರಕ್ಷೆಯ ನಮ ಭಾರತ ಕುವರ
ನಿನ್ನಿಂದಲೆ ಜಯ ಭಾರತ ಕೀರ್ತಿಯದು ಅಮರ
ನೀನಿಲ್ಲದ ಈ ಧರೆಯಲಿ ಆಗುವುದೆ ಸಮರ
ನಿನ್ನಂತ ವರಪುತ್ರರ ಪೆತ್ತ ಆ ಮಾತೆಯೆ ಅಮರ

ಸ್ವಾತಂತ್ರ್ಯದ ಅಮರತ್ವವು ದರೆಗರಿವಾಗಿದೆ ಇಂದು
ಪರತಂತ್ರವು ಅತಂತ್ರವು ಎಂದು ನೀ ಅರಿ ಮುಂದು
ನಿನ ಪ್ರಾಣವ ಪಣಕಿಡುತಲೆ ಕಾದಾಡಲೆ ಬೇಕು
ಸ್ವಾತಂತ್ರ್ಯದ ವಿಜಯ ಧ್ವಜವ ಎತ್ತಿ ಹಿಡಿಯಲೆ ಬೇಕು

ಕಲಿಪಾರ್ಥನು ಶ್ರೀ ಕೃಷ್ಣನು ಶ್ರೀ ಬುದ್ಧನು ನೀನೆ
ಈ ಧರೆಯಲಿ ಧರ್ಮದ ಶ್ರೀ ರಕ್ಷಕನೂ ನೀನೆ
ವೈರಿಯ ಪಡೆ ನಿನ್ನ ಮುಂದುಗಡೆ ನಿಂತಿಹುದು ನೋಡು
ನಾಯಿನರಿಗಿಲ್ಲದ ಅವರ ಹೀನತೆಯ ನೋಡು

ನಿನ್ನಯ ಅಮರತ್ವವು ಧರೆಗರಿವಾಗಿದೆ ಇಂದು
ನಿನ್ನಯ ಪಡೆ ಧರ್ಮದ ಪಡೆ ಶ್ರೀಕೃಷ್ಣನ ಪಡೆ ಎಂದು
ತಮಕರ್ಮದ ಫಲವಲ್ಲದೆ ಮತ್ತೇನುಣುವರು ಎಂದೆ
ಆ ವೈರಿಯ ಮರ್ಧನೆ ಜಗಕೆ ಶಾಂ    ಗಲೆಂದೆ

ನಮದೆಂದಿಗೂ ಎಂದೆಂದಿಗೂ ನಮದೇ ಕಾಶ್ಮೀರ
ತಮದಲ್ಲದ ಭೂಭಾಗವ ತಮದೆನ್ನುವ ಮಾರ
ಇದಕಾಗಿಯೆ ಸರಿಬುದ್ಧಿಯ ಕಲಿಸಿಹನು ಹಮೀರ
ಅವನಲ್ಲವೆ ಶೂರ ಜಯ ಭಾರತ ಕುವರ

ಈ ವಿಶ್ವಕೆ ಸುಖಶಾಂತಿಯು ನಿನ್ನಿಂದಲೆ ಸತ್ಯ
ನೀನಿಲ್ಲದ ಈ ಧರೆಗೆ ಉಳಿದೆಲ್ಲವೂ ಮಿಥ್ಯ
ಸಾಕಾಗಿದೆ ಪರಮಾತ್ಮಗೆ ಆ ದುರುಳರ ಪಾರುಪತ್ಯ
ಶ್ರೀ ಧರ್ಮಕೆ ತಲೆ ಬಾಡುತ ನಡೆ ಜಯ ನಿನದೇ ಸತ್ಯ.

**ಕಾ. ನಾ. ಶ್ರೀನಿವಾಸರಾವ್**
ಜೆ.101, ಆಂಜನೇಯ ಬ್ಲಾಕ್
ಶೇಷಾದ್ರಿಪುರ, ಬೆಂಗಳೂರು-20

ಆಧುನಿಕ ಫ್ಯಾಷನ್ನಿನಲ್ಲಿ ಕಂಗೊಳಿಸಿರಿ

# 'ಮೈಸೂರು ಗೌರ್ನಮೆಂಟ್ ಸಿಲ್ಕ್ಸ್'

ನೂರಕ್ಕೆ ನೂರರಷ್ಟು ಶುದ್ಧವಾದ

## ಮೈಸೂರು ಗೌರ್ನಮೆಂಟ್

## ಸಿಲ್ಕ್ ಸೀರೆಗಳು

## ಜಾರ್ಜೆಟ್‌ಗಳು

## ಕ್ರೇಪ್‌ಗಳು

ಇವುಗಳನ್ನು ಧರಿಸಿರಿ.

ಅವು ನಯವಾಗಿವೆ

ಅಷ್ಟೇ ಅಲ್ಲ

ನಯನಮನೋಹರ ಬಣ್ಣಗಳಲ್ಲಿಯೂ ದೊರೆಯುತ್ತವೆ

ಬಾಳಿಕೆಗೆ ಹೆಸರಾಗಿವೆ

ಆದ್ದರಿಂದಲೇ

ಅವು ಜನಾದರಣೀಯವಾಗಿವೆ.

---

ಷೋ ರೂಮುಗಳು :

. ಮೈಸೂರು ಗೌರ್ನಮೆಂಟ್ ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಮೈಸೂರು-4

ಗುಪ್ತ ಮಾರ್ಕೆಟ್, ಕೆಂಪೇಗೌಡ ರಸ್ತೆ (ಅಲಂಕಾರ್ ಚಿತ್ರಮಂದಿರದ ಎದುರು)
ಬೆಂಗಳೂರು-9

3. ಮೈಸೂರು ಸಿಲ್ಕ್ ಪ್ಯಾಲೇಸ್, ಲಜ್ ಕಾರ್ನರ್,
92, ರಾಯಪೇಟಾ ಹೈರೋಡ್, ಮೈಲಾಪುರ್, ಮದ್ರಾಸ್-4

